# ಹಳ್ಳಿಯ

# ಹತ್ತು ಸಮಸ್ತರು

ಶಿವರಾಮ ಕಾರಂತ

ರೂ. ೨.೦೦




ಪ್ರಕಾಶಕರು:

ಹರ್ಷ ಪ್ರಕಟಣಾಲಯ, ಪುತ್ತೂರು, ದ. ಕ.

# ಮೊದಲ ಮಾತು

ಈ ಬರಹ ಮೊದಲು 'ಸ್ವದೇಶಾಭಿಮಾನಿ' ವಾರಪತ್ರಿಕೆಯಲ್ಲಿ ಕ್ರಮಶಃ ಪ್ರಕಟವಾಯಿತು. ಈಗ ಅದನ್ನು ಒಟ್ಟಿಗೆ ಪುಸ್ತಕರೂಪದಲ್ಲಿ ಕೊಡುತ್ತಿದ್ದೇನಷ್ಟೆ. ಇದಕ್ಕಿರುವ ಪ್ರಸ್ತಾವನೆಯನ್ನು ಕೊನೆಗೆ ಕೊಡುತ್ತಿದ್ದೇನೆ. ಪುಸ್ತಕವನ್ನು ಓದಿದವರಿಗೆ, ಪ್ರಸ್ತಾವನೆ ಕೊನೆಗೇಕೆ ಇದೆ-ಎಂಬುದೂ ಸೂಚನೆಯಾಗದೆ ಇರದು.

ಈ ಬರಹ ಗ್ರಾಮಜೀವನದ ಒಂದು ಬಗೆಯ ಚಿತ್ರವನ್ನು ಕೊಡಲೆತ್ನಿಸುತ್ತದೆ. ಇದು ನನ್ನ ಹುಟ್ಟೂರಾದ 'ಕೋಟ'ದ ಕಲ್ಪನೆಯನ್ನು ಕೊಡಬಹುದಾದರೂ, ಅದೇ ಆಗಿಲ್ಲ. ಜನಗಳೂ ಜೀವಂತ ಜನರ ಪ್ರತೀಕಗಳಲ್ಲ. ಕೇವಲ ಹಲವು ಜನರ ಮಾದರಿಗಳನ್ನು ಆರಿಸಿಕೊಂಡಿದ್ದೇನಷ್ಟೆ. ನಮ್ಮ ಸಾಮಾಜಿಕ ಜೀವನದಲ್ಲಿ ನಲಿಯುವ 'ವಿವಿಧ'ಜಾತಿಗಳ ಸಂಬಂಧ, ಸಂಘರ್ಷಣೆ, ವ್ಯಕ್ತಿತ್ವ. ಪ್ರವೃತ್ತಿಗಳನ್ನು ಚಿತ್ರಿಸುವುದು ನನ್ನ ಒಂದು ಉದ್ದೇಶ. ಇದು 'ಜಾತಿಗಳ ಮಾದರಿ' ಎಂದರೂ ಜನರ ಒಳಿತು, ಕೆಡುಕು ಸ್ವಭಾವಗಳನ್ನು ಕುರಿತು ಚಿತ್ರಿಸುವಾಗ ಈ ಮಾತು ಸುಳ್ಳು. ನೀವು ಈ ಬರಹವನ್ನಾಗಲಿ, ನನ್ನಿತರ ಬರಹಗಳನ್ನಾಗಲಿ ಓದಿದರೆ ಮಾನವನ ಸದ್ಗುಣ, ದುರ್ಗುಣಗಳು ಯಾವೊಂದು 'ಜಾತಿಯ' ಸೊತ್ತಾಗಿರದೆ, ಸಮಾಜದ ಎಲ್ಲರಲ್ಲೂ ಹಾಸುಹೊಕ್ಕಾದ ಗುಣಗಳು ಎಂದು ತಿಳಿಯಬಹುದು.

ಈ ಗ್ರಾಮಜೀವನದ ಚಿತ್ರಗಳನ್ನು ನಾನು ಬರೆದು ಆಗಲೇ ಹತ್ತು ವರ್ಷಗಳಿಗೆ ಮಿಕ್ಕಿ ಕಳೆದುವು. ಶ್ರೀ। ಗೋರೂರರು ತಮ್ಮ 'ಹಳ್ಳಿಯ ರಸಿಕ'ರನ್ನು ಎಂದೋ ನಮಗೆ ಕೊಟ್ಟಿದ್ದಾರೆ.

ನಾನು ಈ ಮಾದರಿಗಳನ್ನು ಕೊಡಲು ಮನಸ್ಸಾದುದೆಂದರೆ-ಸಮಾಜ ಸುಧಾಕರರೂ, ಗ್ರಾಮೋದ್ಧಾರಕರೂ ಅದನ್ನು ತಿಳಿಯಬೇಕೆಂದು; ಗ್ರಾಮ ಜೀವನದ 'ಮನಃಶಾಸ್ತ್ರ' ಎಷ್ಟು ಜಿಡುಕಾದದ್ದೆಂಬುದನ್ನು ತೋರಿಸಲು. ಅಲ್ಲಿ-ಪರಸ್ಪರ ಅವಿಶ್ವಾಸ, ಅಲ್ಪತನ, ಜೀವನದ ಸ್ಪರ್ಧೆಗಳು ಯಾವಾವ ರೀತಿಯಿಂದ ತಾಂಡವವಾಡುತ್ತಿವೆ ಎಂದು ತೋರಿಸಲು. 'ಕಾಂಗ್ರೆಸು' ಹಳ್ಳಿಗೆ ಬಂದರೂ ಅದರಿಂದಲೇ ನಮ್ಮ ಉದ್ಧಾರವಾಗದೆಂದು ನನ್ನ ತಿಳಿವು. ಅದೂ

ಕೂಡ ಗ್ರಾಮದ ಪಂಗಡಗಳನ್ನು ಬೆಳೆಯಿಸುವ ಭೂತವಾದೀತು; ಆಗಿದೆ. ಕಾರಣ—ಜನಗಳಲ್ಲಿನ ಜಾತೀಯತೆಯ ಮತ್ಸರ, ಬಡತನದಿಂದ ಬರುವ ಕುಯುಕ್ತಿ, ಹಣದ ಸೊಕ್ಕು, ಸಣ್ಣ ತೆರನ ಬಂಡುವಳುಗಾರಿಕೆ, ಜತೆಗೆ ಮಾಸದ ಸಹಜವಾದ ಪ್ರಣಯ ಸ್ಪರ್ಧೆ— ಇವೆಲ್ಲವೂ ಸಮಾಜ ಜೀವನವನ್ನು ಕಲುಕಿಸುತ್ತವೆ. ಕೊನೆಯ ಪ್ರಶ್ನೆಯು ಮಾನವತೆಯು ಉಳಿಯುವ ತನಕವೂ ಉಳಿಯುವ ಪ್ರಶ್ನೆ; ಉಳಿದುವನ್ನಾದರೂ ನಾವು ಸರಿಪಡಿಸಬಹುದು. ಅವನ್ನು ಬಗೆಹರಿಸದೆ, ಯಾವ ಮೇಲ್ಪುರಿಯನ್ನು ಕಟ್ಟಿದರೂ, ಬೇರಿನ ಗುಣವೇ ಕುಡಿಯಲ್ಲಿಯೂ ಕಾಣಿಸೀತು.

ಹಳ್ಳಿಯ ಕೆರೆಗಳಲ್ಲಿ ಅಂತರಗಂಗೆ ಬೆಳೆದು ನೀರೇ ಕಾಣಿಸದಂತಾದರೂ, ಎಡೆ ಎಡೆಗಳಲ್ಲಿ ಕೆಲವು ತಿಳಿನೀರಿನ ತೆರವುಗಳು ಬಾಳಿನ ವಿಶಾಲ ಬಾನ್ನು ಬಿಂಬಿಸುತ್ತವೆ, ಅವೇ ನಮ್ಮ ಅಳಿದುಳಿದ ಆಸೆಗಳು.

೯—೧—೧೯೪೪
ಪುತ್ತೂರು

ಇತಿ
**ಶಿವರಾಮ ಕಾರಂತ**



# ಹಳ್ಳಿಯ ಹತ್ತು ಸಮಸ್ತರು

## ೧. ಸೀತ್ಯೈತಾಳರು

ಕೆರೆಮನೆ ಸೀತಾರಾಮ ಐತಾಳರು ಎಂಬುದು ಅವರ ಹೆಸರು. ಅವರ ಮನೆ ಇರುವುದು ನಮ್ಮ ಊರಿನ ಕೆರೆದಂಡೆಯ ಮೇಲೆ; ಹಾಗಾಗಿ ಅವರನ್ನು ಕೆರೆಮನೆ ಐತಾಳರು ಎಂದು ಜನರು ಕರೆಯುವುದೂ ಉಂಟು. ಟಪ್ಪಾಲು ವಿಳಾಸದ ಮಟ್ಟಿಗೆ ಅವರು ಸೀತ ಐತಾಳರು; ರಿಕಾರ್ಡಿನ ರೂಢಿಗೆ ಸೀತ್ಯೈತಾಳರು—ಹೀಗೆ ಒಂದೊಂದು ರೀತಿಯಿಂದ ಅವರನ್ನು ಕರೆಯುತ್ತಾರೆ. ಅವರ ಮನೆಯನ್ನು, ಕೆರೆದಂಡೆಯ ಮೇಲೆ ನಾನು ಬಲು ಚಿಕ್ಕವನಾಗಿರುವಾಗಲೇ ನೋಡಿದ್ದೆ. ಆಗ ಅವರದು ಹುಲ್ಲಿನ ಮನೆಯಾಗಿತ್ತು. ಆಮೇಲೆ ಕೆಲವು ವರ್ಷಗಳ ಕಾಲ ಅರ್ಧ ಹುಲ್ಲು, ಅರ್ಧ ಹಂಚುಗಳಿಂದ ಮರೆಯುತ್ತಿತ್ತು. ಮೊನ್ನೆ ಮೊನ್ನೆ,ಹುಲ್ಲು ಹೋಗಿ ಮನೆಗೆ ಹಂಚು ಬಂದಿದೆ. ಮುಂದಿನ ವರ್ಷ ಬಿದಿರನ್ನೆಲ್ಲಾ ಕಳಚಿ ಒಳ್ಳೆ ಪಕ್ಕಾಸು, ರೀಪುಗಳಿಂದಲೇ ಮನೆಯ ಮಾಡನ್ನು ಮಾಡಬೇಕು ಎಂದು ಹೇಳುತ್ತಿದ್ದಾರೆ. ಕೆರೆದಂಡೆಯ ಮೇಲಿನ ಇನ್ನೊಂದು ಮನೆಯೆಂದರೆ—ದೇವರ ಗುಡಿ. ಅಲ್ಲಿರುವುದು ವಿಷ್ಣುಮೂರ್ತಿ ವಿಗ್ರಹವೆಂದು ಕಾಣುತ್ತದೆ.ವಿಷ್ಣುಮೂರ್ತಿಯ ಗುಡಿ ನಮ್ಮ ಊರಿನ ಹೆಸರಾದ ಗುಡಿಯಲ್ಲ. ಅದು ಐತಾಳರ ಮನೆಯ ದೇವರದು; ಆದರೂ 'ಪ್ರಾಕಿ'ನಿಂದ ಹತ್ತೋ, ಇಪ್ಪತ್ತೋ ರೂಪಾಯಿ ತಸದೀಕು ಸಿಗುತ್ತಿದೆಯಂತೆ.

ಸೀತ್ಯೈತಾಳರ ಮನೆಯು ವಾಸ್ತವಕ್ಕೂ ಅಗ್ರಹಾರದ ಒಂದು ಭಾಗ. ಅದರ ಇನ್ನೊಂದು ಸೆರಗು ನಾರಾಯಣ ಐತಾಳರದ್ದು. ಅಗ್ರಹಾರ ಎಂದ ಮೇಲೆ ಸೀತ್ಯೈತಾಳರಿಗೂ ನಾರಾಯಣ ಐತಾಳರಿಗೂ ಎಣ್ಣೆ ಸೀಗೆ ಎಂದು ಹೇಳಬೇಕಾಗಿಲ್ಲ. ಅದೂ ಅಲ್ಲದೆ ನಾರಾಯಣ ಸೀತ್ಯೈತಾಳರ ಖಾಸಾ ತಮ್ಮ. 'ತನಗೆ ಮೀಸೆ ಬಂದ ಮೂರು ದಿವಸದೊಳಗೇ' ಹಿಸೆ ಕೇಳಿದ ಭಟ. ಆಗಲೇ ಪಾಲಾಯಿತು ಅಣ್ಣ ತಮ್ಮಂದಿರೊಳಗೆ! ಕಂಡರೂ ಕಾಣದಂತೆ ಸರಿಯುವ ಕ್ರಮ ಬಂದಿತು. ಈ ರೀತಿಯು ಅವರಲ್ಲಿ ಮಾತ್ರವಲ್ಲ, ಅವರನ್ನು ನೆಚ್ಚಿ ಬಂದ ಮಡದಿಯರಲ್ಲೂ ಯಥಾಕ್ರಮವಾಗಿ ರೂಢಿಗೆ ಬಂದಿತು. ಮನೆಯ

ಹಿಂದಿನ 'ಗುಮ್ಮಿ'ಗೆ ಸೀತ್ಮೈತಾಳರ ಹೆಂಡತಿ ಪಾರ್ವತಮ್ಮನೂ ಹೋಗುತ್ತಾಳೆ. ನಾರಾಯಣನ ಹೆಂಡತಿ ನಾಗಕ್ಕನೂ ಹೋಗುತ್ತಾಳೆ. ಇಬ್ಬರೂ ಗಳಿಗೆ ಗಳಿಗೆಗಳ ತನಕವೂ — ಮೂಗು, ಕೈ ಮಸಿಮಾಡಿಕೊಂಡು ಒಬ್ಬರ ಮುಖ ನೋಡಿ ಇನ್ನೊಬ್ಬರು ಅಸಹ್ಯಪಟ್ಟು, ಪಾತ್ರೆಯನ್ನು ಹೊಯಿಗೆ ಹಾಕಿ ಸಿಟ್ಟಿನಿಂದ ಸವೆಯುತ್ತ ಕುಳಿತಾರೆಯೇ ವಿನಾ 'ಏನು, ಎಂಥದು' ಎಂದು ಬಾಯಿ ತೆರೆಯಲಿಕ್ಕಿಲ್ಲ. ಇವರು ಮಾತನಾಡಿದರೆ ಮನೆಯ ಗಂಡಸರಿಗೆ ವೈಗೆ ಹಿಡಿಯುವುದಿಲ್ಲ ಎಂಬುದೂ ನಿಜ. ಅಪ್ಪ ಅಮ್ಮಂದಿರ ತಿಥಿ ದಿವಸ ಮಾತ್ರ, ವರ್ಷಕ್ಕೆ ಎರಡು ದಿವಸ, ಆ ಸತ್ತವರ ಪುಣ್ಯಬಲದಿಂದ ಎಂಬಂತೆ ಇಬ್ಬರೂ ದರ್ಭೆ ಸಿಕ್ಕಿಸಿಕೊಂಡು, ಪಿಂಡದ ಮುಂದೆ ನಾಲ್ಕು ಕ್ಷಣ ಕುಳಿತಿರುತ್ತಾರೆ. 'ಪಿಂಡ' ಕಾಗೆಗೆ ಬಿತ್ತು ಎಂತಾದರೆ, ಅವರವರ ಮುಖಾಬಿಲೆ ಮುಂದಿನ ಶ್ರಾದ್ಧಕ್ಕೇ ಸರಿ.

ನಾರಾಯಣ ಅಣ್ಣನಂಥ ಕಾರುಭಾರಿಯೂ ಅಲ್ಲ; ಮಾತುಭಾರಿಯೂ ಅಲ್ಲ. ಅವನು ಹಿಸೆ ಪಡೆದ ಮೇಲೆ ಅವನಿಗೆ ಉಳಿದುದು ಏನೂ ಇಲ್ಲ. ಅದರ ಮೇಲೆ ಅಖಂಡ ಏಳು ವರ್ಷಗಳ ವರೆಗೆ ಅಣ್ಣತಮ್ಮಂದಿರಲ್ಲಿ ರಣಾಗ್ರವಾಯಿತು. ಹೈಕೋರ್ಟಿನ ತನಕವೂ ಮೂರಾವೃತ್ತಿ ಸುತ್ತಿ ಬಂದದ್ದಾಯಿತು. ಕೊನೆಗೆ ಮನೆಯ ದೇವರ ಪೂಜೆ, ಅಂದರೆ 'ವಿಷ್ಣುಮೂರ್ತಿಯ ತಲೆಯ ಮೇಲಿಷ್ಟು ನೀರೆರೆಯುವ ಹಕ್ಕು ಅಣ್ಣ ಸೀತ್ಮೈತಾಳರದ್ದು' ಎಂದು ಮೂಲ ತೀರ್ಪು ಖಾಯಂ ಆಯಿತಂತೆ. ಮುಂದೇನು? ನಾರಾಯಣ ಬರಿಗೈಯ್ಯಿಂದ ಬೆಂಗಳೂರನ್ನು ಸೇರಿ ಬಳೆ ಪೇಟೆಯಲ್ಲೋ, ಸುಲ್ತಾನನ ಪೇಟೆಯಲ್ಲೋ ಉಡುಪಿ ಹೊಟೇಲನ್ನು ನಡೆಯಿಸಿಕೊಂಡು ಬರತೊಡಗಿದನು. ತಿಂಗಳಿಗೆ ನಾಲ್ಕೋ, ಐದೋ ರೂಪಾಯಿಗಳನ್ನು ಹೆಂಡತಿಗೆ ಮಣಿ-ಆರ್ಡರು ಮಾಡುತ್ತ ಬರುತ್ತಿದ್ದಾನೆ. ವರ್ಷಕ್ಕೊಮ್ಮೆ, ಸಾಲಿಗ್ರಾಮ ಜಾತ್ರೆ ಸಮಯಕ್ಕೆ ಊರಿಗೆ ಬಂದು, ಒಂದು ತಿಂಗಳ ಕಾಲ ಇದ್ದು, ತಿರುಗಿ ಬೆಂಗಳೂರಿಗೆ ಚಿತ್ತೈಸುತ್ತಾನೆ.

ಊರಲ್ಲೇ ಉಳಿದು, ಊರವರೆಲ್ಲರಿಗೂ ಬೇಕಾಗಿ, ಹೆಸರು ಗಳಿಸಿದ ಭಟರು ಎಂದರೆ ಸೀತ್ಮೈತಾಳರು. ಊರಿನಲ್ಲಿ ಎಷ್ಟೋ ಜನರು ಹೇಳುತ್ತಾರೆ— 'ಸೀತ್ಮೈತಾಳರು ಎಂದರೆ ದ್ರೋಣಾಚಾರ್ಯರು' ಎಂದು. ಕಾರಣವೆಂದರೆ —ಅವರಲ್ಲಿ ಬ್ರಾಹ್ಮಣ್ಯಕ್ಕೆ ಸಾಕಷ್ಟು ಬ್ರಾಹ್ಮಣ್ಯವಿದೆ; ಕ್ಷಾತ್ರಕ್ಕೆ ಬೇಕಷ್ಟು ಕ್ಷಾತ್ರವಿದೆ. ಯಾವುದೇ ನಂಬ್ರವಾಗಲಿ, ಅವರು ಅರ್ಧದಲ್ಲಿ ಬತ್ತಳಿಕೆ ಕೆಳಗೆ

ಇಳಿಸಿದವರೇ ಅಲ್ಲ. ಎಲ್ಲವನ್ನೂ ಹೈಕೋರ್ಟು ಮುಟ್ಟಿಸಿಯೇ ನೋಡು ವವರು. ಯಾಕೆ? ಅವರ ಇನ್ನೊಬ್ಬ ಹಿರಿಯಣ್ಣ ಇರಲಿಲ್ಲವೇ-ಪದ್ದ ಐತಾಳರು. ಪದ್ದ ಐತಾಳರು ತೀರಿಕೊಂಡಮೇಲೆ, ಸೀತ್ತೈತಾಳರು ಅವರ ಹೆಂಡತಿಯನ್ನು ಕರೆದು "ತಣ್ಣಗೆ ನಮ್ಮ ಮನೆಯಲ್ಲಿ ಕೂಳು ತಿಂದು ಬಿದ್ದಿರಬಾರದೇ" ಎಂದು ಎಷ್ಟು ಪರಿಯಿಂದ ಕೇಳಿದರೂ ಅವಳು ಕೇಳಲಿಲ್ಲ. ಬದಲಿಗೆ ತವರು ಮನೆಗೆ ಹೋಗಿ, ಕೊಂಬು ಬರಿಸಿಕೊಂಡು ಅಶನಾರ್ಥಕ್ಕೆ ನೋಟೀಸು ಕೊಡಿಸಿದಳು. ಸುರುವಾಯಿತು--'ಖಾಡಾಖಾಡಿ'. ಆಗ "ಎಲ್ಲಾ ಆಸ್ತಿಯೂ ದೇವರ ವಿನಿಯೋಗದ್ದೇ ವಿನಾ ಸ್ವಂತ ಏನಿಲ್ಲ; ಆದುದರಿಂದ ಅಶನಾರ್ಥ ತಿರುಪತಿಯಲ್ಲಿ" ಎಂದು ಸೀತ್ತೈತಾಳರ ಸಾಧನೆ ನಡೆಯಿತು. ನಡೆದು ಹೈ ಕೋರ್ಟನ್ನೂ ಏರಿತು. ಆದರೆ ಐತಾಳರ ದುರ್ದೈವಕ್ಕೆ ಆ 'ಸತ್ತವನ ಹೆಂಡತಿಗೇ' ಗುಣವಾಗಿ,ಅಶನಾರ್ಥ ಕೊಡಲೇಬೇಕೆಂದು ಅಲ್ಲಿಯೂ ತೀರ್ಪು ಖಾಯಂ ಆಯಿತು. ಆದರೇನು? ಪ್ರತಿವರ್ಷವೂ ಕೋರ್ಟಿನ ಮೆಟ್ಟಲನ್ನು ತುಳಿಯದೆ ಅವಳಿಗೆ ಕಾಳು ಅಕ್ಕಿ ಸಹ ಸಿಗಲಾರದು" ಎಂದು ಐತಾಳರ ಭೀಷ್ಮ ಪ್ರತಿಜ್ಞೆ ಇಂದಿಗೂ ನಡೆದುಕೊಂಡು ಬಂದಿದೆ.

ಇಷ್ಟೆಲ್ಲ ಅವರ ಕ್ಷಾತ್ರದ ವಿಷಯವಾದರೆ, ಈಗ ಬ್ರಾಹ್ಮಣ್ಯದ ವಿಚಾರ ಕೇಳಿ. ಇವತ್ತಿಗೂ ಅವರು ಧೋತ್ರ ಉಡುವ ರೀತಿ, ಅಂಚು ತೀಡುವ ಕ್ರಮ, ಹೆಜ್ಜೆ ಇಡುವ ಗತ್ತು-ಅವರ ತಂದೆ ಅಪ್ಪೈತಾಳರ ತದ್‌ಪ್ರತಿ. ಈ ಹೊತ್ತಿನ ವರೆಗೆ, ಎಂಥ ಸೆಕೆಗಾಲವಿರಲಿ, ಮಧ್ಯಾಹ್ನ ಬಿಸಿಲಿಗೆ ಹೊಯಿಗೆ ಕಾದ'ಬೇಲೆ' ಯಲ್ಲಿ ತಿರುಗುವುದಿರಲಿ, ತೊಗಲು ಬಾರನ್ನು ಮೆಟ್ಟಿದವರಲ್ಲ. ಕುಂದಾಪುರ ಕೋರ್ಟು ನಮ್ಮೂರಿನಿಂದ ಕಡಿಮೆ ಎರಡು ಹರದಾರಿಗೆ ಮಿಕ್ಕಿ ಇದೆ. ಅಷ್ಟು ದೂರವನ್ನೂ ವಾರಕ್ಕೆ ನಾಲ್ಕು ಸಾರಿಯಾದರೂ ನಡೆದೇಹೋದಾರು ವಿನಾ, ಹೊಲೆಯರು ಕೂಡುವ ಬಸ್ಸಿನಲ್ಲಿ ಕುಳಿತು ಸವಾರಿ ಮಾಡುವವರಲ್ಲ.

ಬೆಳಗಿನ ಜಾವಕ್ಕೆ ಐತಾಳರು ಎದ್ದು, ಮಿಂದು, ವಿಷ್ಣುಮೂರ್ತಿ ಗೊಂದು ಘಂಟೆ ಬಾರಿಸಿ, ಗಂಜಿ ಊಟ ಸಹ ಮಾಡದೆ ಹೊರಟರು ಎಂದರೆ- ಹೊತ್ತು ಕಂತಿದ ಮೇಲೆಯೇ ಕುಂದಾಪುರದಿಂದ ತಿರುಗಿ ಮನೆಗೆ ಬಂದು, ಮಿಂದು, ಮಡಿ, ಜಪಗಿಪ ಮುಗಿದ ಮೇಲೇನೆ ಊಟ ವೈಶಾಖ ಮಾಸವೇ ಬರಲಿ, ಹಸಿವಾಯಿತೆಂದು ಹಾದಿಯಲ್ಲಿ ಅಲ್ಲಿ, ಇಲ್ಲಿ ನುಸುಳಿ ಹೊಟೇಲು ಕಾಫಿಯ ರುಚಿ ನೋಡುವವರಲ್ಲ. ಬಾಯಾರಿಕೆ ಆದರೆ, ಅದೂ ಕುಡಿಯ

ಬೇಕು ಎಂದು ಅನಿಸಿದರೆ, ಮನೆಯಿಂದ ಹೊರಡುವಾಗ್ಗೆ ಇಷ್ಟು ಹೆಸರು ಕಾಳು ಕಡೆಯಿಸಿ ಬೆಲ್ಲಹಾಕಿ ಕುಡಿದಾರು. ಇನ್ನು ಕುಂದಾಪುರದಲ್ಲಿ ವಕೀಲ ಅಚ್ಚುತರಾಯರಲ್ಲಿಗೆ ಹೋಗಿ, ತಾವೇ ಬಾವಿಯಿಂದ ನೀರು ಸೇದಿ ಕುಡಿದಾರು. ಅಚ್ಚುತರಾಯರು ಬ್ರಾಹ್ಮಣರಷ್ಟೆ.ಅವರೇ ಎಲ್ಲಾದರೂ 'ಐತಾಳರೇ –ಬನ್ನಿ, ಒಂದಿಷ್ಟು ಕಾಫಿ ಕುಡಿಯಿರಿ' ಎಂದರೆ 'ಕಾಫಿ ಗರ್ಮಿಯಾಗುತ್ತದೆ' ಎಂದು ಸುಧಾರಿಸಿಯಾರೇ ವಿನಾ, ಅವರ ಮನೆಯ 'ಪೇಟೆಯ ಹಡೆಮ್ಮೈಲಿಗೆ' ಕಾಫಿಯನ್ನು ಪ್ರಾಣಹೋದರೂ ಕುಡಿಯಲಿಕ್ಕಿಲ್ಲ.

ಐತಾಳರ ರೂಪ ನೋಡಬೇಕಾದದ್ದು. ತೆಳ್ಳಗಿನ ಶರೀರ; ಮಾಂಸವೇ ಇಲ್ಲ; ಎಲುಬೇ ಎಲ್ಲ-ಎನ್ನುವ ಜಾತಿ. ಉಡುವುದಕ್ಕೆ ಒಂದು ಮೂಡಲು ಪಂಚೆ. ಅದರ ಮೇಲೆ ಬೆಳ್ಳಿ ಉಡಿದಾರ ಕಾಣಿಸುವ ಹಾಗೆ ತೂಗಿಕೊಂಡು, ನಡುವಿಗೆ ತ್ರಾಣ ಬರುವಂತೆ ಒಂದು ಹಸುರು ಧಾವಳಿ ಬಿಗಿದರು ಎಂದರೆ– ಆ ವರ್ಚಸ್ಸು ಎಂಥದು! ಕೊರಳಿಗೆ ಒಂದು ಸಣ್ಣಗಿನ ರುದ್ರಾಕ್ಷಿಗಳ ಮಾಲೆ ಯಿದೆ. ಇನ್ನು ಮೈಮೇಲೆ, ಹಣೆಯ ಮೇಲೆ, ಫರ್ಲಾಂಗು ದೂರ ಕಾಣಿಸ ಬಹುದಾದ ವಿಭೂತಿಯ ಪಟ್ಟೆಗಳಿರುತ್ತವೆ. ಸಾಮಾನ್ಯವಾಗಿ ಕ್ಷೌರಕ್ಕೆ ಅನು ಕೂಲವಾದ ತಿಥಿ ಸಿಗದೆ, ಅಂದರೆ ಅವರ ಪುರುಸೊತ್ತಿಗೂ ಈ ತಿಥಿಗೂ ಸರಿಬರುವುದೆಂಬುದೇ ಇಲ್ಲ, ಯಾವಾಗಲೂ ಮುಖದ ಮೇಲೆ ಹಿಂಗಾರು ಮಳೆಗೆ ಅವಸರದಿಂದ ಕೊಯ್ದು ಬತ್ತದ ಗದ್ದೆಯ ಕೂಳಿಗಳ ಹಾಗೆ, ಕಪ್ಪು ಬಿಳಿ ಮಿಶ್ರಿತ ಕೂದಲುಗಳು ಕಾಣಿಸಿ, ಅವರನ್ನು ವೈದಿಕ ಯುಗಕ್ಕೆ ಅದಷ್ಟು ಸಮೀಪ ಸೆಳೆಯುತ್ತದೆ.

ಐತಾಳರು ಮನೆಯಲ್ಲಿದ್ದರೆ, ದಿನನಿತ್ಯವೂ ಒಂಬು ಹತ್ತು ನಿಮಿಷ ವಾದರೂ ಭಗವದ್ಗೀತೆ ಪಾರಾಯಣವನ್ನು ಮಾಡದೆ ಇರುವವರಲ್ಲ. ಹಳೆ ಸಂಪ್ರದಾಯಗಳ ಮೇಲೆ ಅವರಿಗಿರುವ ಮಮತೆ ಅಷ್ಟಿಷ್ಟಲ್ಲ. ಯಾಕೆ? ಇನ್ನೂ ಅವರ ಮನೆ ಚಾವಡಿಯ ಮೇಲೆ ಚಿಮಿಣಿ ದೀಪ ಉರಿದುದೇ ಇಲ್ಲ. ಕಾಲುದೀಪವಾಯಿತು; ಅದಕ್ಕೆ ಹೊನ್ನೆ ಎಣ್ಣೆಯಾಯಿತು.

ಮತ್ತೊಂದು ಸಂಗತಿಯಿದೆ–ಐತಾಳರು ಏನು ಮಾಡುವುದೇ ಇರಲಿ, 'ಆ ವಿಷ್ಣುಮೂರ್ತಿ ದೇವರು ನಡೆಯಿಸಿದ ಹಾಗೆ ಆಗುತ್ತದೆ' ಎನ್ನುವವರು ಅವರು; ಅಂತಹ ವಿಶ್ವಾಸ ಮನೆಯ ದೇವರಲ್ಲಿದೆ.

ಹೆಚ್ಚಾಗಿ ಹಗಲು, ಐತಾಳರು ತಮ್ಮ ಮನೆಯಲ್ಲಿರುವುದು ದುರ್ಲಭ.

ಕೋರ್ಟು ವಹಿವಾಟೇ ಅವರಿಗೆ ಜಾಸ್ತಿ; ಅದಿಲ್ಲದ ದಿವಸ ಪೌರೋಹಿತ್ಯ ಸ್ವಲ್ಪ ಇರುತ್ತದೆ. ಒಂದೊಂದು ದಿನ ಮನೆಯಲ್ಲಿ ಇರುವುದಾದರೆ, ಆ ದಿನ ಅವರು ಸ್ನಾನಕ್ಕೆ ಇಳಿಯುವಾಗ ಹೊತ್ತು ಪಡುವಿಗೆ ತಿರುಗಿ, ಎರಡು ಗಳಿಗೆ ಯಾದರೂ ಸಲ್ಲುತ್ತದೆ. ಆ ಮೇಲೆ ದೇವರ ಪೂಜೆಯು ನಡೆದು ಊಟವಾಗ ಬೇಕು. ಕಾರಣವಿಷ್ಟೆ-ಐತಾಳರೆಂಬರೆ ಎಷ್ಟೋ ಜನರಿಗೆ ಆಲೋಚನೆಗೆ ಒಬ್ಬ ಮಂತ್ರಿ ಇದ್ದ ಹಾಗೆ, ಉಪದೇಶಕ್ಕೆ ಒಬ್ಬ ಗುರುಗಳು ಇದ್ದ ಹಾಗೆ. ಅವರ ಅಮೂಲ್ಯ ಶಿಷ್ಯಕೋಟಿಯಲ್ಲಿ ನಮ್ಮ ಮೂಡುಮನೆ ನಾಗಯ್ಯ ಸೆಟ್ಟಿಯೊಬ್ಬ. ನಾಗಯ್ಯನಿಗೆ ವಾಸ್ತವವಾಗಿ 'ಬ್ರಾಂಬ್ರು ಹುಳ' ನೋಡಿದರೆ ಸಹಿಸುವುದಿಲ್ಲ. ಆದರೆ ಐತಾಳರೆಂದರೆ ಜೀವ. ಅವರ ಮುಂದೆ ತಲೆಬಾಗಿಸುತ್ತಾನೆ.ಐತಾಳರು ಎಂದರೆ ದೇವರೆಂದೇ ಅವನ ಲೆಕ್ಕ: ''ನಿಜಕ್ಕೂ ಅವರೊಬ್ಬರು ಬ್ರಾಂಬ್ರಲ್ಲಿ ತಪ್ಪಿ ಹುಟ್ಟಿರಬೇಕು'' ಎಂದು ನಾಗಯ್ಯನ ನಿಶ್ಚಿತವಾದ ತೀರ್ಮಾನ.

ಮೊನ್ನೆ ದಿವಸ ಆ ಮಾರಾಮಾರಿಯಾಯಿತಲ್ಲ–ಕಾಳಿಂಗಯ್ಯನ ಆಸ್ತಿ ಸ್ವಾಧೀನತೆಯ ಗದ್ದಲ. ಆ ದಿವಸದ ಮುಕ್ಕಾಲುವಾಸಿ ಗದ್ದಲಕ್ಕೆ ಕಾರಣ ನೆಂದರೆ ನಾಗಯ್ಯನೇ. ಕಾಳಿಂಗಯ್ಯನಿಗೆ ಜನರನ್ನು ಒದಗಿಸಿಕೊಟ್ಟು, 'ಕಾಳ ಗಕ್ಕೆ ನಿಲ್ಲಿ' ಎಂದವನು ಅವನೇ. ಶೀನಪ್ಪ ಸೇರೆಗಾರನು ಪಾಪದವನಾಗಿದ್ದರೆ ನಾಲ್ಕು ಏಟು ತಿಂದುಕೊಂಡು ಬರಬೇಕಿತ್ತು. ಅದರ ಸಂಗತಿ ಹೀಗಾಗಿತ್ತು- ನಾಗಯ್ಯ ಆ ಗದ್ದಲದ ಹಿಂದಿನ ರಾತ್ರಿ ಐತಾಳರಲ್ಲಿಗೆ ಬಂದು ''ಐತಾಳರೇ, ಕಾಳಿಂಗಯ್ಯನಿಗೆ ಮಾತುಕೊಟ್ಟಿದ್ದೇನೆ; ಅವನ ಆಸ್ತಿ ಶೀನಪ್ಪನ ಸ್ವಾಧೀನ ವಾಯಿತೆಂದರೆ ಅವನಿಗೆ ಮೂರೇ ಮೂರುಗೇಣು ನೆಲ ಉಳಿಯುವ ಹಾಗಿಲ್ಲ. 'ನೀವಲ್ಲದೆ ಹೋದರೆ ನನ್ನ ಮರ್ಯಾದೆ ಉಳಿಯದು' ಎಂದು ನನ್ನಲ್ಲಿಗೆ ಬಂದು ಕಾಳಿಂಗಯ್ಯ ಅತ್ತಿದ್ದಾನೆ. 'ಆಗಲಿ' ಎಂದು ಹೇಳಿದ್ದೇನೆ. ನಾಳೆ ಬೆಳಗಾಗುವುದರೊಳಗೆ ಅಣ್ಣು, ಬಚ್ಚ, ಮುದರ, ಇನ್ನೂ ಒಂದು ಎಂಟು ಹತ್ತು ಜನರಿಗೆ ದೊಣ್ಣೆಗಳನ್ನು ಕೊಟ್ಟು ಕಳುಹಿಸಬೇಕೆಂದಿದ್ದೇನೆ. ಆಮೊನ ನಲ್ಲ ಅವನ ಅಪ್ಪ ಬಂದರೂ ಆಸ್ತಿ ಸ್ವಾಧೀನವಾಗುವ ಮಾತು ಹಾಗಿರಲಿ'' ಎಂದು ಹೇಳಿದ.

ಐತಾಳರು ''ನಾಗಯ್ಯ, ನಾಳೆ ಅಮೀನನಿಗೆ ಪೆಟ್ಟುಗಿಟ್ಟಾದರೆ ನಿನಗೆ ಫಾಸಿಯಾದೀತಲ್ಲ. ಈಗ ಕಾಳಿಂಗಯ್ಯನ ಎದ್ರು ಯಾರು?....ಶೀನಪ್ಪ ಸೇರೆ ಗಾರ. ಅವನಿಗೆ ನಾಲ್ಕು ಏರಿಸಿದರೂ ಚಿಂತೆಯಿಲ್ಲ. ಅವನ ಪಕ್ಷಕ್ಕೆ ಸಾಕ್ಷಿ

ಹೊರಡವ ಹಾಗೆ ಮಾಡುವುದು ದೊಡ್ಡ ಕೆಲಸವಲ್ಲ; ಆದರೆ ಅಮೀನನ ಮೈ ಮುಟ್ಟುವುದು ಒಳ್ಳೆಯದಲ್ಲ.''

"ಆ ಅಮೀನ ನನಗೆ ತಿಳಿಯದವನೇನು? ಅವನಿಗೆ ಮೊದಲೇ ಸಮನಾಗಿ ಬೆಸೆದು ಬಿಟ್ಟಿದ್ದೇನೆ."

"ಆ ಪೈಂಟನ್ನಾದರೆ ಗಟ್ಟಿಮಾಡು. ಅಮೀನ ಹಿಂದಕ್ಕುಳಿಯಲಿ; ಶೀನಪ್ಪನ ಕಾಲನ್ನು ಮುರಿದು ಹಾಕಿದರೆ, ನಮ್ಮೂರಿಗೇ ಸುಖವಾಯಿತು. ಮುಂದೆ ಅವನು ಕಾಳಿಂಗಯ್ಯನ ಮೇಲೆ ಕ್ರಿಮಿನಲ್ಲು ಮಾಡಿ, ಹನ್ನೆರಡೂ ವರೆಯ ಬಡ್ಡಿಯ ಹಣವನ್ನೆಲ್ಲ ಕಕ್ಕಲಿ. ಅವನು ಇಷ್ಟು ವರ್ಷಗಳ ಕಾಲ ಕಾಳಿಂಗಯ್ಯನಿಂದ ತಿಂದ ಬಡ್ಡಿಯ ಹಣ ಸ್ವಲ್ಪವೇನು?''

"ಬಡ್ಡಿಗಿಡ್ಡಿ ಕೊಡುವ ಜನ ಕಾಳಿಂಗನೇ! ಅದಕ್ಕಲ್ಲವೇ ಅಡವುದಾರ ಶೀನಪ್ಪನಿಗೆ ಆಸ್ತಿ ಡಿಕ್ರಿಯಾದದ್ದು. ನಿಮಗೆ ಸಂಗತಿ ಚೆನ್ನಾಗಿ ತಿಳಿಯದೆಂದು ಕಾಣುತ್ತದೆ. ಈಗ ಆಸ್ತಿ ಶೀನಪ್ಪ ಸೇರೆಗಾರನಿಗಾಗಿ ವರ್ಷ ಮೂರಾಯಿತು. ಜಾಗ–ಗೇಣಿಗೆ ಕಾಳಿಂಗಯ್ಯನಿಗಿದೆ. ಆ ಗೇಣಿಯೂ ಬಾಕಿಯಾಗಿ, ತಿರುಗಿ ನಂಬ್ರವಾಗಿ, ಸ್ಥಳ ಸ್ವಾಧೀನತೆಗೆ ಹೂಡಿದ ವ್ಯಾಜ್ಯವಿದು. ಆದರೆ ನೋಡಿ-ಕಾಳಿಂಗಯ್ಯನಿಗೆ ಊಟಕ್ಕೆ ಬೇರೆ ಗತಿಯಿಲ್ಲವಲ್ಲ. ಗೇಣಿ ತಿನ್ನದೆ ಏನು ಮಾಡಿಯಾನು? ಅಲ್ಲದೆ ಅವನು ನಮಗೆ ಬೇಕಾಗುವ ಜನ. ಅವನನ್ನು ಕಾಪಾಡದೆ ಮಾರ್ಗವೂ ಇಲ್ಲ; ಅವನು ನನಗೆ ಶರಣು ಬಂದಿದ್ದಾನೆ."

"ಶೀನಪ್ಪನ ಮನೆ ಹಾಳಾಗಲಪ್ಪ. ನೀನು ಮನೆಗೆ ನಡೆ. ನಾಲ್ಕು ಜನ ಮಾತ್ರ ಗಟ್ಟಿಯಾಗಿ ಇರಲಿ. ನಿನ್ನ ಪಟಾಲಮನ್ನು ನೋಡಿಯೇ ಶೀನಪ್ಪ ಹೆದರಿ ಓಡಬೇಕು. ಕಾಳಿಂಗನಿಂದ ನಿಮಗೆ ಒಂದಲ್ಲ ಒಂದು ದಿವಸ ಉಪಕಾರವಾದೀತು. ಈ ಶೀನಪ್ಪನು ಯಾರಿಗೂ ಬೇಡವಾದವನು. ಆಗಲಿ, ಅಷ್ಟಕ್ಕೇ ಬಂದದ್ದೇನು? ವಿಷ್ಣುಮೂರ್ತಿ ದೇವರಿದ್ದಾನೆ, ಹೆದರಬೇಡ'' ಎಂದು ನಾಗಯ್ಯನನ್ನು ಐತಾಳರು ಹರಸಿ ಕಳುಹಿಸಿಕೊಟ್ಟರು.

ಸೀತೈತಾಳರ ತಲೆಯೆಂದರೆ, ಸಾಮಾನ್ಯ ಹೈಕೋರ್ಟಿಗೂ ಮೀರಿದ್ದು. ಅಲ್ಲವಾದರೆ, ಸೀಗೆಬೈಲು ವೆಂಕಟರಮಣಯ್ಯನ ನಂಬ್ರದಲ್ಲಿ ವಕೀಲರಿಗೆ ಏನು ಮಣ್ಣೂ ಗೊತ್ತಿರಲಿಲ್ಲ; ಎಲ್ಲಾ ಆಲೋಚನೆಗಳೂ ಸೀತೈತಾಳರವು. ವಕೀಲ ಅಚ್ಯುತರಾಯರು ಮೂಲದಿಂದಲೂ ಧೈರ್ಯ ಹೇಳದೆ "ಸುಮ್ಮನೆ ಹಣ ಹಾಳುಮಾಡಬೇಡಿ. ಸಾಲದ ಹಣಕ್ಕೆ ಆಸ್ತಿಯ ಚೂರೂ ಉಳಿಯುವು

ದಿಲ್ಲ. ನಿಮಗೆ ಯಾವ ಮಣ್ಣಿನ ರಿಕಾರ್ಡೂ ಇಲ್ಲ'' ಎಂದು ನಿರಾಶೆಗೊಳಿಸಿದ್ದ ರಲ್ಲ! ಆಗ ಸೀತ್ಮೈತಾಳರು ಎದ್ದು, ವಕೀಲರ ಕಿವಿಯಲ್ಲಿ 'ಪಿಸಿಪಿಸಿ' ಮಾಡಿ ''ಹಳೇ ತಾಮ್ರ ಶಾಸನವಿದೆ; ಎಲ್ಲವೂ ಮನೆ ದೇವರ ಆಸ್ತಿಯೆಂಬ'' ಪೈಂಟನ್ನು ಗಟ್ಟಿಮಾಡಿಯೇ ಬಿಟ್ಟರಲ್ಲ. ಅಚ್ಚುತಯ್ಯನಿಗೆ ಆಶ್ಚರ್ಯ ವಾಯಿತು. ಕೊನೆಗೆ ಹೈಕೋರ್ಟಿನಲ್ಲೂ ಆ ತಾಮ್ರಶಾಸನವೇ ನಿಜವಾಯಿತು.

ಬರಿಯ ಆಲೋಚನೆ, ಹಟ, ಇವುಗಳಲ್ಲಿ ಮಾತ್ರ ಐತಾಳರು ಮುಂದಕ್ಕೆ, ವೈದಿಕ ವೃತ್ತಿಯಲ್ಲಿ ಹಿಂದಕ್ಕೆ–ಎಂಬುದಾಗಿ ತಿಳಿಯಬೇಡಿ. ವೈದಿಕ ವೃತ್ತಿ ಹೇಗೂ ಆಯಿತಲ್ಲ; ಜತೆಗೆ ಮಂತ್ರವಾದವನ್ನೂ ಮಾಡುತ್ತಾರೆ; ಜಡ ಜಾಪತ್ತು ಬಂದರೆ ಬೂದಿ ಮಂತ್ರಿಸಿ ಕೊಡುತ್ತಾರೆ. ಅವರು ಮನೆಯಲ್ಲಿದ್ದ ದಿವಸ ಅಲ್ಲಿ ಸಂತೆಯ ಗದ್ದಲ. ಎಷ್ಟು ಜನ ಅವರಲ್ಲಿ ಬಂದು ಹೋಗುವವರು!

''ನಮ್ಮ ಮನೆಯ ದನ ನಿನ್ನೆಯಿಂದಲೂ ಹಾಲು ಕೊಡುವುದಿಲ್ಲ; ಕೈ ಹಾಕಿದರೆ ಕಚಕಚನೆ ತುಳಿಯುತ್ತದೆ.''

''ನಮ್ಮ ಗಂಡಿಗೆ ಗಾಳಿ ಸೋಂಕೋ ಏನೋ; ಹಿಡಿದ ಜ್ವರ ಬಿಡುವು ದಿಲ್ಲ. ಏನು ಮಾಡಲಿ?''

ಹೀಗೆ ಒಂದೊಂದು ತೆರನಾದ ಪೀಡೆ ಹಿಡಿದುಕೊಂಡು ಬಂದು ಅವ ರಿಂದ ಬೂದಿ ತೆಗೆದುಕೊಂಡು ಮರಳುತ್ತಾರೆ. ''ಮೊನ್ನೆ ರೂರಲ್ ಆಸ್ಪತ್ರೆ ರಾಮರಾಯರು ಆರು ರೂಪಾಯಿ ತಿಂದರು; ಗುಂಡೂರಾಯನ ಮಗನ ಜ್ವರ ಕೊನೆಗೂ ಗುಣವಾದದ್ದು ಐತಾಳರ ಬೂದಿಯಿಂದಲೇ. ಒಂದೇ ಒಂದು ದಿವಸದಲ್ಲಿ ಜ್ವರ 'ಠಂ' ಎಂದು ಇಳಿಯಿತು. ಮೊದಲಿಗೇ ಐತಾಳರ ಮುಂದಿನ ಮಣೆಯ ಮೇಲೆ ಮೂರು ಕಾಸು ಇರಿಸುವ ಬುದ್ಧಿ ಗುಂಡೂರಾ ಯರಿಗೆ ಬಂದಿದ್ದರೆ, ಡಾಕ್ಟರರಿಗೆ ತಿನ್ನಿಸಿದ ರೂಪಾಯಿಯಾದರೂ ಉಳಿ ಯುತ್ತಿತ್ತು. ಐತಾಳರು ಹೇಳುವಂತೆ 'ಹಳ್ಳಿಯವರಿಗೆ ಈ ಡಾಕ್ಟ್ರ ಹಿಡಿಯುವ ಹಾಗಿಲ್ಲ. ಅವರ ಮದ್ದು, ನೀವೆಷ್ಟೇ ಹೇಳಿ, ಪೇಟೆ ಶಹರುಗಳಿಗೆ ಆಗ ಬಹುದೇ ಏನಾ, ಹಳ್ಳಿಗೆ ಹೇಳಿಸಿದ್ದಲ್ಲ.,

ಮೊನ್ನೆ ದಿವಸ ಪರಮಯ್ಯನ ಮನೆಯ ಒಂದು ಎಮ್ಮೆ, ಎಂಟು ವರಹ ಗಳನ್ನು ಕೊಟ್ಟು ಕುಂಜಾಲು ಸಂತೆಯಿಂದಲೇ ತಂದದ್ದು, ಹಾಲು ಒಂದು 'ಬೇಳೆ' ಸಮಸಮ ಇತ್ತು. ಏನಿಲ್ಲ! ಮಧ್ಯಾಹ್ನ ಬೈಲಿನಿಂದ ಮೇಂದು ಬಂದಿತು; ಗರ್ರನೆ ತಲೆತಿರುಗಿ ಬಿದ್ದುಬಿಟ್ಟಿತು. ಪರಮಯ್ಯ ಐತಾಳರ ಮನೆಗೆ

ಜೀವಬಿಟ್ಟು ಓಡಿ ಹೋದ. ಐತಾಳರು ಕುಂದಾಪುರಕ್ಕೆ ಹೋಗಿದ್ದರು. ಸಂಜೆಯ ವರೆಗೆ ಬಾಯಿ ತೆರೆದಿದ್ದು, ಎಲ್ಲಿ ಹೋದರೂ ಮುಸ್ಸಂಜೆಗೆ ಪೈಗಳ ಅಂಗಡಿಗೆ ಬಂದೇ ಬರುತ್ತಾರೆ—ಎಂದು ಅಲ್ಲಿಯೇ ಕಾದು ಕುಳಿತ.

"ಯಾಕೆ ಬಂತು ಪರಮಯ್ಯನ ಸವಾರಿ?" ಎಂದು ಪೈಗಳ ಹೆಂಡತಿ ವಿಚಾರಿಸಿದಳು. ಪರಮಯ್ಯನು ಬಂದ ಉದ್ದೇಶವನ್ನು ಹೇಳಿ "ಬಂದಾರಲ್ಲ ಬೇಗ?" ಎಂದು ಕೇಳಿದನು. "ಈಗ ಬರುವ ವೇಳೆಯಾಯಿತು. ವಕೀಲರಲ್ಲಿ ಕೆಲಸವಿದೆ ಎಂದು ಬೆಳಿಗ್ಗೆ ಹೋಗುವಾಗ ಕರೆದು,ಕೂಗಿ, ಹೇಳಿ ಹೋದರು" —ಎಂದು ಉತ್ತರ ಬಂದಿತು. ಸರಿಯೇ, ಪೈಗಳ ಮನೆಯ ಒಲೆಯಿಂದಲೇ ಐತಾಳರು ಬೂದಿಯನ್ನು ತರಿಸಿ, ಮಂತ್ರಿಸಿಕೊಟ್ಟು, ಪರಮಯ್ಯನನ್ನು ರವಾನೆ ಹಾಕಿದರು.

ಆದರೆ, ಪ್ರತಿಯೊಬ್ಬರಿಗೂ ಸೀತೈತಾಳರನ್ನು ಕಂಡರೆ ಆದೀತು ಎಂದು ಹೇಳಲಾರೆ. ಆದು ನಮ್ಮ ಐತಾಳರೇ ಎನ್ನುವಂತೆ "ಎಲ್ಲರನ್ನು ಮೆಚ್ಚಿಸಲಿಕ್ಕೆ ಮುಕ್ಕಣ್ಣನಿಗೂ ಸಾಧ್ಯವಿಲ್ಲ. ಏನೋ ದೇವರಿಗೆ ಸರಿಯಾಗಿ ನಡೆಯುವುದು; ಮನುಷ್ಯರನ್ನು ನಂಬಿ ಫಲವಿಲ್ಲ." ಐತಾಳರು ಹಾಗೆ ಇದ್ದುದರಿಂದಲೇ ಸರ್ವಸಾಮಾನ್ಯ ಅವರು ಹಿಡಿದ ಕೆಲಸದಲ್ಲಿ ಸೋಲು ಎಂಬುದೇ ಇಲ್ಲ. ಆವರ ಅದೃಷ್ಟವೂ ಚೆನ್ನಾಗಿನದು. ಬರಡು ಎಮ್ಮೆ ಎಂದು ತಿಳಿದೂ ತಿಳಿದು ಮನೆಗೆ ತಂದರೂ, ಅವರ ಹೆಂಡತಿ ಪಾರ್ವತಮ್ಮನ ಕೈಗುಣದಿಂದ ಹೊತ್ತಿಗ ಎರಡು ಸಿದ್ದೆಯಾದರೂ ಹಾಲು ಕರೆದೀತು.



# ೨. ನಾಗಯ್ಯ ಶೆಟ್ಟರು

ನಮ್ಮ ಊರಿನ ವಿಷಯವನ್ನು ಬಲ್ಲವರಿಗೆ, ನಾಗಯ್ಯ ಶೆಟ್ಟರ ಹೆಸರು ಎಂದೂ ಮರವೆಯಾಗಲಿಕ್ಕಿಲ್ಲ. ಅವರ ಕಾರುಭಾರ, ರೀವಿ, ಕಲಾಪ ಎಲ್ಲವೂ ಅಂಥವು. ಕೆಲವರು ಅವರ ಹೆಸರನ್ನು ಕೇಳಿಯೇ ಸಡುಗಲೂಬಹುದು. ಒಳಗಿಂದೊಳಗೆ 'ಒಂದು ದಿವಸ ಅವನ ಹೆಣ ಬಾಗಿಲಿನಲ್ಲಿ ಬೀಳುತ್ತದೆ' ಎನ್ನುವವರೂ ಇದ್ದಾರೆ; 'ಬೀಳಲಿ' ಎಂದು ತೀರ ಆಸೆ ಮಾಡುವವರೂ ಇದ್ದಾರೆ. ಇವೆಲ್ಲ ಅವರಿಗೆ ಆಗದವರ ಮಾತುಗಳು. ಊರು ಎಂದ ಮೇಲೆ ಅಲ್ಲಿ ಪೊಲಗೇರಿ ಇದ್ದೇ ಇದೆ. ಹಳ್ಳಿಯೆಂದ ಮೇಲೆ–ಜಿದ್ದು, ಜಗಳ, ಪಕ್ಷ, ಪ್ರತಿಪಕ್ಷ ತಪ್ಪೀತೇ?

ನಾಗಯ್ಯನ ಒಳ ಹೊರಗುಗಳನ್ನೆಲ್ಲ ಸಮನಾಗಿ ತಿಳಿದವರು ಎಂದರೆ ಸೀತೈತಾಳರು. 'ನಾಗಯ್ಯ ಹ್ಯಾಗೆ?' ಎಂದು ಕೇಳುವುದಾದರೆ ಅವರನ್ನು ಕೇಳಬೇಕು. "ನಾಗಯ್ಯ ಎಂದರೆ ಒಬ್ಬ ತುಂಡರಸ. ಹಿಂದಿನ ಕಾಲವಾಗಿದ್ದರೆ. ನಗರ ಸಂಸ್ಥಾನವನ್ನೋ, ಬಾರಕೂರನ್ನೋ ತಲೆಕೆಳಗೆ ಮಾಡುವ ತಾಕತ್ತು ಇರುವವ. ಈ ಕ್ಷಣಕ್ಕೆ ೫೦೦ ಜನ ಒಂದು ಡಮ್ಮಿಗೆ ಬೇಕು–ಎಂದರೆ ಕೂಡಿಸುವ ತ್ರಾಣ ಅವನಿಗಿದೆ. ನೋಡುವ, ನಮ್ಮೂರಿನಲ್ಲಿ ಅಂಥಾ ಇನ್ನೊಬ್ಬ ಭಟನನ್ನು ತೋರಿಸಿ" ಎಂದು ತೆರೆದ ಬಾಯಿಗೆ ಐತಾಳರು ಹೇಳುತ್ತಾರೆ. ಐತಾಳರ ಮೇಲೆಯೂ ಅದೇ ರೀತಿ ಅಭಿಮಾನ ನಾಗಯ್ಯನಿಗಿದೆ.

ನಾಗಯ್ಯನ ಮನೆತನ ದೊಡ್ಡದು. ಅವನ ತಂದೆ ಇವತ್ತಿಗೆ ಪಡುಪಟ್ಟು ಬೈಲಿನ ಯಜಮಾನರು. ನಾಡವರ ಕುಲಕ್ಕೇ ಒಂದು ಮನೆ ಪಡುಪಟ್ಟಿನದು. ಆ ಒಂದು ಮನೆಯಿಂದ ಸರಕಾರಕ್ಕೆ ಎರಡು ಸಾವಿರ ಮೇಲ್ಪಟ್ಟು ಸರಕಾರ ಹಣ ಸಲ್ಲುತ್ತದೆ. ಇತ್ತ ಅವನ ತಾಯಿಮನೆಯವರೋ! ಅಷ್ಟೇ ಸಮಸಮ ಆಸ್ತಿವಂತರು. ಇನ್ನು ನಾಗಯ್ಯನೋ-ಭಾರೀ ದೊಡ್ಡ ವ್ಯಾಪಾರಿ. ಬಾಳೆಬರೆ, ಆಗುಂಬೆಗಳಿಂದ ಘಟ್ಟದ ಬತ್ತ ಇಳಿದರೆ, ಆತ ಬಿಟ್ಟಮೇಲೆಯೇ ಬೇರೆಯವರ ಕೈಗೆ ಸೇರಬೇಕು. ಮೊದಲು ನಾಗಯ್ಯ 'ಮೆದುವಿನ ಕಂಪೆನಿ' ನಡೆಯಿಸುತ್ತಿದ್ದ. ಈಗ ಇಂಜಿನ್ ತರಿಸಿ ರೈಸು ಮಿಲ್ಲು ಮಾಡಿದ್ದಾನೆ. ಹಳ್ಳಿಯ ಊರಿಗೆ ಈ ಇಂಜನ್–ಗಿಂಜನ್ ಎಲ್ಲಾ ಯಾಕೆ ಎಂಬುದಾಗಿ ಯಾರಾದರೂ ಕೇಳಿ

ಪರೆ, "ಹಾಗಾಗಬೇಕಯ್ಯ. ಈ ಪಟಿಂಗರನ್ನು-ನಾಗೀ, ರುಕ್ಕೂ,ಲಟ್ಟುಪಟ್ಟು-ಎಂದು ಕರೆದು ದಿನನಿತ್ಯ ಸಲಾಂ ಹಾಕುವ ರಗಳೆಯಾದರೂ ಹೋಯಿತಲ್ಲ. ಅವಕ್ಕೆ ಒಂದು ಕುಡಾರ್ನಯಿಲ್ ಇಂಜಿನ್ ಇರಿಸಿ, ಬತ್ತದ ಮಿಲ್ಲೂ ಇರಿಸಿ ಬಿಟ್ಟಿದ್ದೇನೆ" ಎಂದು ಸಮಾಧಾನ ಹೇಳುತ್ತಾನೆ.

ನಾಗಯ್ಯನ ರೂಪವೋ? ಎಣ್ಣೆಗಪ್ಪು ಶರೀರ; ಏನು, ಮೂವತ್ತೆರಡು; ಮೂವತ್ತಮೂರು ವರ್ಷ ಪ್ರಾಯ. ತೆಳ್ಳಗೂ ಅಲ್ಲ, ದಪ್ಪವೂ ಅಲ್ಲ; ಎತ್ತರವೂ ಇಲ್ಲ, ಕುಳ್ಳೂ ಅಲ್ಲ—ಅಂತಹ ಕಾಯ. ಯಾವಾಗಲೂ ತೆಳ್ಳಗಿನ 'ನೇಮಸುತ್ತು' ಉಟ್ಟರೆ, ಮೈಮೇಲೆ ಬೆಳ್ಳಗಿನ ಮಲ್ಲು ಅಂಗಿ; ಅಂಗಿಯೊಳಗಿನ ಬಣ್ಣದ ಬನೀನು ಅರ್ಧರ್ಧ ಕಾಣಿಸುತ್ತಿರಬೇಕು. ಅಂಗಿಗೆ ಚಿನ್ನದ ಗುಂಡಿಗಳು ಬೇರೆ. ಈಗಿನ ರೀತಿಯ ಕ್ರಾಪು ತಲೆಗೆ. ಕಿವಿಗಳಲ್ಲಿ ಕಡಲೆ ಗಾತ್ರದ ಮಿನುಗುವ ವಂಟಿಗಳು. ಒಂದು ಕೈಗೆ ಚಿನ್ನದ ತೋಡಾ ಸಹ ಇದೆ. ನೋಡಿದ ತಕ್ಷಣವೇ—ಶ್ರೀಮಂತರ ಮನೆಯವರು ಎಂದು ಹೊಡೆದು ಹೇಳುವ ಬಿಂಕ, ಧಿಮಾಕು. ವ್ಯಾಪಾರದಿಂದಲೇ ನಾಗಯ್ಯ ಸಿರಿವಂತನಾದನೇ ಎಂದು ಕೇಳಿದರೆ— ಹಾಗೇನೂ ಇಲ್ಲ. "ಇಡೀ ದಿವಸ ತಕ್ಕಡಿಗೆ ಅಂಟಿ ಕುಳಿತಿರಲಿಕ್ಕೆ ನನಗೆ ಗಂಜಿಗೆ ಬೇರೆ ಗತಿ ಇಲ್ಲವೇನು?" ಎನ್ನುತ್ತಾನೆ. ಬರಿಯ ವ್ಯಾಪಾರಿಗಳನ್ನು ಕಂಡು ಅವನೇ ಹಂಗಿಸುತ್ತಾನೆ.

ನಾಗಯ್ಯ ಬಾಡಸಾಲೆಯಲ್ಲಿ ಕಳೆಯುಬಹುದಾದಷ್ಟೇ ಸಮಯವನ್ನು ಕೋಳಿಪಡೆ, ಕಂಬಳ, ತಾಳಮದ್ದಲೆ ಮೊದಲಾದ ವಿನೋದಗಳಲ್ಲೂ ಕಳೆಯುತ್ತಾನೆ. ಕೋರ್ಟಿಗೆ ಹೆದರಿ ಕುಳಿತಿರುವ ವ್ಯಕ್ತಿಯೂ ಅವನಲ್ಲ. ಯಾವಾಗಲೂ ನಾಗಯ್ಯನನ್ನು ಊರಲ್ಲೇ ಕಾಣಬೇಕೆಂದರೆ ಅದು ಸಾಧ್ಯವೂ ಇಲ್ಲ. ವ್ಯಾಪಾರ, ಕೋರ್ಟು, ತಿರುಗಾಟ ಇವುಗಳಲ್ಲಿ ತೇಲುತ್ತಿರುವ ನಾಗಯ್ಯ, ಸಾಮಾನ್ಯ ಮಳೆಗಾಲದ ಸಮಯ ಮಾತ್ರ ಪಡುಪಟ್ಟು ಬೈಲಿನ ಹೆಬ್ಬಾಗಿಲ ಜಗುಲಿಯ ಮೇಲೆ ಒರಗಿ, ದರ್ಬಾರು ನಡೆಯಿಸುವುದನ್ನು ಕಾಣಬಹುದು. ಅದೂ—ಡಾಕ್ಟರರು ಯಾರೋ, "ನೀವು ಮಳೆಗಾಲವೂ ಸುತ್ತಾಡುತ್ತಿದ್ದರೆ ನಿಮ್ಮ ಕೆಮ್ಮು (ನೇವಸ) ಅತಿಯಾದೀತು" ಎಂದು ಹೆದರಿಸಿರುವುದರಿಂದ. ಆಗಲಾದರೆ ನಾಗಯ್ಯ ಹೆಬ್ಬಾಗಿಲಿಗೆ ನಿಜವಾಗಿಯೂ ಅಲಂಕಾರ. ಅವನಿಲ್ಲದ ವೇಳೆಯಲ್ಲಿ ಅವನ ತಂದೆ ಸೂರಪ್ಪ ಸೆಟ್ಟರು, ಪಡುಪಟ್ಟು ಯಜಮಾನರು "ಹೂಂ, ನಾಗ ಇಲ್ಲದೆ ಮನೆ ರೈಸುವುದೇ ಇಲ್ಲ"ವೆಂದು ಹೇಳುತ್ತಾರೆ.

ನಾಗಯ್ಯ ಒಮ್ಮೆಗೆ "ಗೇಣಿ ಬಾಕಿ ಇರಿಸಿದವರು ಯಾರು?" ಎಂದು ಉಸಿರು ಇಷ್ಟು ಹೊರಡಿಸಿದನು ಎಂದರೆ, ಎಂಥ ಕಳ್ಳ ಒಕ್ಕಲಾದರೂ ಸಂಜೆಯೊಳಗೆ ಬತ್ತ ಬಂದು ಮನೆಯ ಅಂಗಳದಲ್ಲಿ ಬೀಳುತ್ತದೆ. ಹಾಗೆ ಪಡಪಟ್ಟು ಬೈಲಿನ ಒಕ್ಕಲು ಮಕ್ಕಳು ಗೇಣಿ ಬಾಕಿ ಈ ವರೆಗೆ ಮಾಡಿದ್ದಿಲ್ಲ; ಮಾಡಿದವರ ಬಗ್ಗೆ ಕೋರ್ಟಿಗೆ ಹೋದುದೂ ಇಲ್ಲ. ಆದರೂ ಬರಹದಲ್ಲಿ ಆರು ಮುಡಿ ಅಕ್ಕಿ ಎಂದಿದ್ದರೆ, ಏಳು ಮುಡಿಯಂತೆ ವಸೂಲಾಗಿಯೇ ಆಗುತ್ತದೆ. ಹಾಗೇನಾದರೂ ತಪ್ಪಿದರೆ, 'ನಾಗೊಡೀರು ಹೆಬ್ಬಾಗಿಲಿನ ಕಂಬಕ್ಕೆ ಬಿಗಿಯಿಸಿ ಹೊಡೆಯಿಸಿಯಾರು' ಎಂಬುದು ಒಕ್ಕಲುಗಳಿಗೆ ತಿಳಿದೇ ಇದೆ. ಅವರದು ಒಮ್ಮಟ್ಟಾಗಿರುವ ಆಸ್ತಿ; ನಿತ್ಯವೂ ಕಣ್ಣಿಗೆ ಬೀಳುವ ಒಕ್ಕಲುಗಳು.

ಪಡುಪಟ್ಟು ಬೈಲಿನ ಯಜಮಾನರಾದ ಸೂರಪ್ಪ ಶೆಟ್ಟರು ಎಂದರೆ ಅಲಂಕಾರಕ್ಕೆ; ವಾಸ್ತವದ ದರ್ಬಾರು ನಾಗಯ್ಯನದು. ಅವನು ಹೇಳಿದ ಗೇಣಿ, ಅವನು ಮಾಡಿದ ಲೆಕ್ಕ, ಅವನು ಅಳೆದ ಅಳತೆ. ಊರಪೇಟೆಯಲ್ಲಿ ಮುಡಿಗೆ ರೂ. ನಾಲ್ಕರಂತೆ ಅಕ್ಕಿಗೆ ಧಾರಣೆಯಿದ್ದರೆ ಅವರ ಒಕ್ಕ ೪||ಯಂತೆ ಕೊಟ್ಟು, ಧನಿಯರಿಂದ ಅಕ್ಕಿ ಕೊಂಡಾರಲ್ಲದೆ ಹೊರಗೆ ಹೋಗುವಂತಿಲ್ಲ. ಅವರಲ್ಲೇ ಕೊಳ್ಳಬೇಕು. ಇದು ಈಗಿನ ಯಜಮಾನರ ಕಾಲದಲ್ಲಿ ಮಾತ್ರ ವಲ್ಲ, ಹಿಂದಿನ ಯಜಮಾನರ ಕಾಲದಲ್ಲೂ ಹಾಗೆಯೇ. ಮನೆಗೆ ಯಜಮಾನರು ರಿಕಾರ್ಡಿನ ಮಟ್ಟಿಗೆ ಯಾರೇ ಇರಲಿ —ನಾಗಯ್ಯ ಅಳೆದು ಉಳಿದ ಗೇಣಿ, ಮನೆಗೆ.

ಅನ್ನದ ಗುಣವನ್ನು ಅಗಳಿನಿಂದ ಹೇಳಬಹುದು ಎಂಬುದು ವಾಡಿಕೆ ತೈನಾತಿ ಕಂಡು ಧನಿಯನ್ನು ಹೇಳಬಹುದು ಎಂದರೂ ತಪ್ಪಾಗದು. ಅಂಥಾ ತೈನಾತಿ ಬಚ್ಚ, ಅಂಥಾ ಧನಿಯೆಂದರೆ ನಾಗಯ್ಯ. ಬಚ್ಚ ಮೊಗೇರರ ಜಾತಿಯಲ್ಲಿ ಹುಟ್ಟಿ ಬೆಳೆದವನು. ಚಿಕ್ಕಂದಿನಿಂದಲೂ ಪಡುಪಟ್ಟು ಮನೆಯ ದನ ಕರುಗಳನ್ನು ಮೇವಿಗೆ ಅಟ್ಟಿಬರುತ್ತಿದ್ದವನು. ಬೆಳೆದಂತೆ, ಅವರ ಮನೆಯ ನೊಗವನ್ನೇರತೊಡಗಿದನು. ಒಂದು ದಿವಸ ನಾಗಯ್ಯನಿಗೆ ಬಚ್ಚನ ಗತ್ತುಗಿತ್ತುಗಳನ್ನು ಕಂಡು, ಖಾಯಿಸು ಆಗಿ, "ನಡೆ, ಇನ್ನು ಈ ಚಾಕ್ರಿ ಸಾಕು; ಗಂಟಿ ಮೇಯಿಸಲು ಬೇರೆ ಯಾರಾನ್ನಾದರೂ ಮಾಡುವ. ನೀನು ನಮ್ಮ ಬಂಡಸಾಲೆಗೇ ನಡೆ. ನಮ್ಮ ಉಗ್ರಾಣಿ ಮಾಡುವ ನಿನ್ನ" ಎಂದು ಅಜ್ಞಾಪಿಸಿದರು. ಅಂದಿನಿಂದ ಬಚ್ಚನ ಅದೃಷ್ಟ ಬಲಕಾಯಿಸಿತು. ನಾಗಯ್ಯ

ಧನಿಯರು ಹೊರಗೆಲ್ಲಿಗೆ ಹೊರಡುವುದೇ ಇರಲಿ, ಬಚ್ಚನಿಲ್ಲದೆ ಹೊರಡು ವಂತಿಲ್ಲ. ಹಗಲಿಗೆ ಹೊರಟರೆ ಅದರ ಜತೆಗೆ ಒಂದು 'ಬೆಟರಿ ಲೇಂಪ್ಪು' ಇಂಗ್ಲಿಷಿನಲ್ಲಿ 'ಎ.ಡಿ.ಸಿ.' ಎನ್ನುತ್ತಾರಲ್ಲ ಹಾಗೆ ಬಚ್ಚ. ಬಚ್ಚನ ಮೈಕಟ್ಟನ್ನು ಕಂಡರೆ ಎದೆ ಜುಮ್ ಎನ್ನಬೇಕು. ಧನಿಯರ ಸುದ್ದಿಯನ್ನು ತಿಳಿಯ ಬೇಕಾದರೆ ನೀವು ಬಚ್ಚನನ್ನೇ ಕೇಳಬೇಕು.

"ಸಣ್ಣ ಧನಿಯರ ಸುದ್ದಿಯನ್ನು ಕೇಳುತ್ತೀರಾ? ನಾಗೊಡೆಯರ ಪಂಚಾ ಯತಿಯೇ! ಅವರೆಂದರೆ ಮೈಸೂರು ಮಹಾರಾಜರಯ್ಯ. ಅವರ ಘನ ಸ್ತಿಕೆ, ಅವರ ಜರ್ಬು, ಅವರ ಮಾತಿಗಿದ್ದಂಥ ಭರಮು—ಈ ಮಾಗಣೆಯಲ್ಲಿ ಮತ್ಯಾರಿಗಿದೆ? ಇಡೀ ನಮ್ಮ ರಾಷ್ಟ್ರಕ್ಕೆ ಇಲ್ಲ, ಅಂತೇನೆ.

"ಒಡೆಯರಿಗೆ ದುಡ್ಡು ಎಂದರೆ ಕಸಕ್ಕೆ ಸಮ. ಸಂಪಾದನೆ ಮಾಡಿದರೂ ಹಾಗೆ, ಕಳೆದರೂ ಹಾಗೆ, ಒಂದು ರಾತ್ರೆಗೆ, ಖುಶಿಕಂಡರೆ ಸಾವಿರ ರೂಪಾಯಿ ಚೆಲ್ಲಿಯಾರು."

ನೀವು ಇದನ್ನು ಕೇಳಿ ಇದೆಲ್ಲವೂ 'ಗರ್ನಾಲು' ಎಂದು ಅನ್ನಬಹುದು. ಆದರೆ ಬಚ್ಚ ತನ್ನ ಒಡೆಯನ ದರ್ಬಾರನ್ನು ಕಣ್ಣಾರೆ ಕಂಡವನು. ಬಚ್ಚ ಹೇಳುವ ಕತೆಗಳನ್ನು ನೀವೇ ಕೇಳಿ: ಪಡುಪಟ್ಟಿಗೆ ಜಾರು ಪೂಜಾರಿ ಸ್ವಲ್ಪ ಗಟ್ಟಿಯಾದ ಒಕ್ಕಲು ಮಗನಷ್ಟೆ. ಒಂದು ವರ್ಷ ಅವನಿಂದ ಗೇಣಿಯೂ ಬಾಕಿಯಾಗಿತ್ತು. ಒಂದಲ್ಲ ಎರಡಲ್ಲ—ಅರುವತ್ತು ಮುಡಿ ಅಕ್ಕಿ. ಜಾರು ಯಾಕೆ ಬಾಕಿ ಮಾಡಿದ—ಎಂದು ದೊಡ್ಡ ಒಡೆಯರಾಡಿದ ಸುದ್ದಿಯು ಸಣ್ಣ ಧನಿಯರ ಕಿವಿಗೆ ಬಿತ್ತು. ಕೂಡಲೇ ನನ್ನನ್ನು ಕರೆಯಿಸಿ, 'ಬಚ್ಚ, ಆ ಜಾರೂಗೆ ಹೇಳು-ಸಂಜೆಯೊಳಗೆ ಅವರು ೬೦ ಮುಡಿ ಅಕ್ಕಿಯನ್ನು ಭಂಡಾರು ಮನೆಗೆ ಮುಟ್ಟಿಸು' ಎಂದರು. ನನಗೆ ಮಾತು ತಿಳಿಯದೆ 'ಬಂಡಸಾಲೆಗೇನು?' ಎಂದು ಕೇಳಿದೆ. ಧನಿಯರು ನಕ್ಕು 'ನೀನೊಬ್ಬ ಕೆಪ್ಪ (ಕಿವುಡ); ಭಂಡಾರಕ್ಕನ ಮನೆಗೆ' ಎಂದರು. ನಾನು ತಕ್ಷಣ ಜಾರೂಗೆ ಸುದ್ದಿ ತಿಳಿಸಿದೆ. ಅಕ್ಕಿ ಮುಡಿ ಗಳ ಸಾಲು ಅದೇ ಸಂಜೆಗೆ ಭಂಡಾರಕ್ಕನ ಮನೆಗೆ ಹೋಯಿತೇ........ಅವಳ ಅದೃಷ್ಟ ಹೇಳಿ!"

ಭಂಡಾರುವಿಗೂ ಧನಿಯರಿಗೂ ಬಹಳ ಒಳ್ಳೆಯದಿದೆ-ಎಂದು ಬಚ್ಚ ನಿಗೆ ಗೊತ್ತು. ಆದರೆ ತೆಗೆದ ಬಾಯಿಗೆ ೬೦ ಮುಡಿ ಅಕ್ಕಿಯನ್ನು ಅಲ್ಲಿಗೆ ಸಾಗಿಸು ಎನ್ನಬೇಕಾದರೆ, ಸಾಮಾನ್ಯ ಮರ್ಜಿಯಾಗಲಾರದಷ್ಟೆ. ನಾಗಯ್ಯ

ಧನಿಯರು ಒಂದು ರಾತ್ರಿ, ನೂರರ ಹತ್ತು ನೋಟುಗಳನ್ನು ರಾಮಚಂದ್ರ ರಾಯರಿಗೆ ಎಸೆದ ಸಂಗತಿಯನ್ನು ಬಚ್ಚನ ಹತ್ತಿರವೇ ಕೇಳಿ. "ಅದನ್ನು ಕೇಳುತ್ತೀರಾ? ಇವತ್ತಿಗೆ ಆರೆಂಟು ವರ್ಷ ಮಿಕ್ಕಿ ಕಳೆಯಿತು. ನಮ್ಮೂರ ಸುಶೀಲು ಆ ದಿನ ಸತ್ತದ್ದು ಹ್ಯಾಗೆಂದು ಇದುವರೆಗೆ ನರಹುಳುವಿಗೂ ಗೊತ್ತಿಲ್ಲ. ಪಾಂತಿಭೇದಿಯೆಂದು ಊರಿಗೆ ಸುದ್ದಿಯಾಯಿತು. ಅದು ಪಾಂತಿಯೂ ಅಲ್ಲ, ಮತ್ತೊಂನೂ ಅಲ್ಲ. ಸಾಯುವ ತನಕವೂ ಸುಶೀಲು ಕಟ್ಟಿಗೆ ತುಂಡಿನ ಹಾಗಿದ್ದಳು.

"ಅವಳನ್ನು ಇರಿಸಿಕೊಂಡವರು ಯಾರೆಂಬುದು ಗೊತ್ತಲ್ಲ ನಿಮಗೆ? ಆ ಬ್ರಾಹ್ಮಣರು—ಸತ್ಹೋದರಲ್ಲ ಈಗ. ಪಟೇಲರು, ಪಟೇಲರು ಅನ್ನುತಿದ್ದರು. ಪಟೇಲರಲ್ಲ ಅವರು-–ಕರೆಯುವುದು ಮಾತ್ರ ಪಟೇಲರು ಎಂತ. ಶಾಮಣ್ಣಯ್ಯನ ಸಂಗತಿ ಅನ್ನುವುದು ನಾನೀಗ. ಶಾಮಣ್ಣಯ್ಯನನ್ನು ಅರ್ಧ ನುಂಗಿದ್ದು ಸುಶೀಲು. ಸಾಯುವಾಗ ಅವಳಿಗೆ ಬರಿಯ ಇಪ್ಪತ್ತನಾಲ್ಕೋ, ಇಪ್ಪತ್ತೈದೋ ವರ್ಷ ಪ್ರಾಯವಷ್ಟೆ. ಕಾಣಲಿಕ್ಕೆ ಹದಿನೆಂಟೂ ಕಾಣಲಿಕ್ಕಿಲ್ಲ. ಪ್ರಾಯದ ಕೊಬ್ಬು ಅನ್ನಿ. ಅದೆಲ್ಲ ನಮ್ಮ ಧನಿಯರ ಮುಂದೆ ನಡೆದೀತೇ?

"ಒಂದು ರಾತ್ರಿ ನಾನೂ,ಧನಿಯರೂ, ಕತ್ತಲಾದ ಮೇಲೆ ಪೇಟೆಯಿಂದ ಮನೆಗೆ ಬರುತ್ತಿದ್ದೆವು. ಯಾಕೋ ಏನೋ, ಸುಶೀಲು ಮನೆಯ ಮುಂದಿನ ಓಣಿಯಿಂದಾಗಿ ಬಂದೆವು. ಸುಶೀಲು ಚಾವಡಿಯ ಮೇಲೆ ದೀಪ ಇರಿಸಿಕೊಂಡು ಎಲೆ ಅಡಿಕೆ ತಿನ್ನುತ್ತಿದ್ದಳು. ಯಾಕೋ ಏನೋ, ನಮ್ಮ ಧನಿಯರ ನಮರಿಗೆ ಸುಶೀಲು ಬಿದ್ದಳು. ಧನಿಯರಿಗೆ ಆಗ ಇಪ್ಪತ್ತು ವರ್ಷ ಆಗಿತ್ತೋ ಏನೋ. ನಾವು ಅವಳ ಮನೆಯನ್ನು ದಾಟಿ ಹೋದ ಮೇಲೆ, ಧನಿಯರು ನನ್ನನ್ನು ಕರೆದರು 'ಬಚ್ಚ-ಆದ್ಯಾರದು? ಕಾಣಲಿಕ್ಕೆ ಬಲು ಪಸಂದಾಗಿದ್ದಾಳೆ' ಎಂದರು.

"ನನಗೆ ಹೇಳಬೇಕೆ? 'ಸು' ಎಂದರೆ 'ಸುಕ್ಕಿನುಂಡೆ' ಎಂದು ಅಂದಾಜು ಮಾಡುವವ ನಾನು. ಮರುದಿನ ಅದೇ ಸುಶೀಲು ಮನೆಗೆ ಹೋಗಿ 'ನಾಗಯ್ಯ ಒಡೆಯರು ನಿಮ್ಮನ್ನು ಬಹಳ ವಿಚಾರಿಸಿದರು' ಅಂದೆ. ಅವಳ ಡೌಲು ಬಲ್ಲಿರಾ? 'ಯಾರು, ಆ ಹುಡುಗನೇ!' ಅಂದಳು. ತಿಂದ ತೆಗಲೆ! ನನಗೇನು? ಹಾಗೆಯೇ ಹೋಗಿ ಧನಿಯರಿಗೆ ಹೇಳಿದೆ. ಮೂರು ದಿವಸದೊಳಗೆ ನಮ್ಮಲ್ಲಿಗೆ, ಅಂದರೆ ಬಂಡಸಾಲೆಗೆ, ಕುಂದಾಪುರ ಸರ್ಕಲು ಇನೇಸಪೆಟ್ಟರು ರಾಮ

ಚಂದ್ರರಾಯರ ಸವಾರಿ ಬಂದಿತಲ್ಲ. ಅವರಿಗೂ ಧನಿಯರಿಗೂ ಒಂದು ರಾಶಿ ಗುಜು ಗುಜು, ಗುಸು ಗುಸು ನಡೆಯಿತಪ್ಪ. ಥಟ್ಟನೆ ಕಿಸೆಯಿಂದ ಧನಿಯರ್‍ರ್ ೧೦ ನೋಟು, ನೂರರದ್ದು, ಮಹಾರಾಯರೇ, ಎಸೆದುಬಿಟ್ಟರು. ರೂಪಾಯಿಯಲ್ಲವೇ? ಬಾಯಿ ತೆರೆದು ನಕ್ಕರು ಇನೇಸಪೆಟ್ಟರು. ಅವರು ರೂಪಾಯಿಗಳ ಕಟ್ಟನ್ನು ಕಿಸೆಗೆ ತುರುಕಿಕೊಂಡು ನಡೆದೇಬಿಟ್ಟರು.

"ಅಲ್ಲಿಂದ ಒಂದು ಹದಿನೈದು ದಿವಸವೂ ಕಳೆಯಲಿಲ್ಲ. ಸುಶೀಲು ರಿಜಿಸ್ಟ್ರಿಗೆ ದಾಖಲು.—ಯಮುನ ರಿಜಿಸ್ಟ್ರಿಗೆ—ಅಂದೆ. ಶಾಮಣ್ಣಯ್ಯನ ಫಿರ್ಯಾದಿಯಾಯಿತು, ಮಣ್ಣಾಯಿತು, ಮಸಣವಾಯಿತು; ಸತ್ತವಳು ಸತ್ತೇ ಹೋದಳು. ಆ ಬ್ರಾಹ್ಮಣ ನಾಲ್ಕು ವರ್ಷ ಕಾಲ 'ಸುಶೀಲು ಸುಶೀಲು' ಎಂದು ರಾಗಮಾಡಿ ನರಳಿಯೇ ಸತ್ತಿತು. ಅವಳು ಅಷ್ಟು ಬೇಗನೆ ಸತ್ತುದಕ್ಕಾಗಿ ಶಾಮಣ್ಣಯ್ಯನ ಮಕ್ಕಳಿಗೆ ನಾಲ್ಕು ಮುಡಿ ಆಸ್ತಿಯಾದರೂ ಉಳಿಯಿತು. ಅವಳು ಬದುಕಿ ಇರುತ್ತಿದ್ದರೆ-ಪಡಿ ಅಕ್ಕಿಗೂ ಗತಿಯಿರುತ್ತಿರಲಿಲ್ಲ.

"ಮತ್ತೆಲ್ಲಾ ಸರಿಯೇ. ಅದೊಂದು ಬಾಬಿನಲ್ಲಿ ಮಾತ್ರ ನಮ್ಮ ಧನೀರ ಮನಸ್ಸು ಸ್ವಲ್ಪ ಹಾಗ್ಹಾಗೆ. ಅಂದರೆ, ಪ್ರಾಯ ನೋಡಿ. ವಯಸ್ಸು ಹೋದರೆ ತನ್ನಂತೆ ಹದಕ್ಕೆ ಬರುತ್ತದೆ ಬುದ್ಧಿ. ಅವರಂತೆಯೇ ದುಡ್ಡು, ಪ್ರಾಯ ಸೇರಿದರೆ ಬೇರೆಯವರು ಇದಕ್ಕಿಂತ ಹೈಲಾಗುತ್ತಿದ್ದರು. ಹಾಗೇದ್ರೆ ಇವರೇನೆ ಬೇಕು; ಅವರ ಶೋಕಿಗೂ ಒಂದು ಲೆಕ್ಕ ಇದೆ. ಈ ಊರಿನಲ್ಲಿ 'ಇಂಥಾ ಮನೆ'ಯೆಂದು ನಿಗದಿ ಉಂಟು. ಸುಮ್ಮನೆ ಕಂಡಲ್ಲಿಗೆ ಹೋಗುವವರಲ್ಲ. ಇನ್ನು ಹಾಗೇಯೇ—ಅವರು ಇರಿಸಿಕೊಂಡವಳು, ಎಲ್ಲಾದರೂ ಬೇರೆಯವರನ್ನು ಕರೆದಳು —ಎಂದು ತಿಳಿದರೆ ಕಣ್ಣೆರಡು ಬಿಟ್ಟು ಹೂಳಿಸಿಯಾರು."

ಇತ್ತಲಾಗಿ ಅವರ ತೈನಾತಿ ಬಚ್ಚ; ಅತ್ತಲಾಗಿ ಅವರ ಗುರು ದ್ರೋಣಾಚಾರ್ಯರಂಥ ಸೀತೈತಾಳರು. ಇವರಿಬ್ಬರದೂ ಸರ್ಟಿಫೀಕೆಟು ಇದೆಯೆಂದ ಮೇಲೆ, ಸಮ್ಮೂರಿನ ಮಟ್ಟಿಗಾದರೂ ನಾಗಯ್ಯ ಒಬ್ಬ ತುಂಡರಸು ಎಂಬುದರಲ್ಲಿ ಸಂಶಯವೇನು?

ನಾಗಯ್ಯನ ಠೀವಿ ನೋಡಬೇಕಾಗಿದ್ದರೆ ಆ ಕಳೆದ ಚುನಾವಣೆಯಲ್ಲಿ ನೋಡಬೇಕಿತ್ತು. ಅವನು ಕಾಂಗ್ರೆಸು ಪಾರ್ಟಿ; ಸೂರಪ್ಪ ಸೆಟ್ರು 'ಜಸ್ಟೀಸು' ಪಾರ್ಟಿ. ಚಿಕ್ಕ ಒಡೆಯರಿಗೆ ತಿಳಿಯದಂತೆ, 'ಹೆಗ್ಡೆಯರಿಗೆ ದೊಡ್ಡ ಒಡೆಯರು ಓಟಿನ ಮಾತನ್ನು ಕೊಟ್ಟರು. ಅವರು ಮಾತು ಕೊಟ್ಟದ್ದು ತಿಳಿ

ಯಿದೆ, ಇವನು 'ಸೆಟ್ಟ'ರಿಗೆ ಮಾತನ್ನು ಕೊಟ್ಟನು. ಇಲೆಕ್ಷನ್ ಮುಗಿಯುವ ತನಕವೂ ನಾಗಯ್ಯ ಮನೆಗೆ ಕಾಲಿರಿಸಲಿಲ್ಲ. ಬಂಡಸಾಲೆಯಲ್ಲೇನೆ ಬಿಡಾರ. ಆ ಎರಡು ತಿಂಗಳ ಕಾಲ ಬಚ್ಚ ತಿರುಗಾಡಿ ಹುಡಿಮಾಡಿದಷ್ಟು ಗದ್ದೆ, ಕಡಿದು ಎಸೆದಷ್ಟು ಸೀಯಾಳ, ನಮ್ಮಂಥವರಿಂದ ನಾಲ್ಕು ವರ್ಷಗಳಲ್ಲಿ ಮುಗಿಸಲಿಕ್ಕೆ ಬರಲಿಕ್ಕಿಲ್ಲ. ಸೂರಪ್ಪ ಸೆಟ್ಟರು ಮನೆಯ ಯಜಮಾನರಾದ ರೇನು—ಜಸ್ಟೀಸಿಗೆ ನಾಲ್ಕು ಓಟುಗಳೂ ಸಿಗಲಿಲ್ಲ. ಅದೂ ಯಜಮಾನ ರದ್ದು....ಮನೆಯವರದ್ದು! ಒಕ್ಕಲು ಮಕ್ಕಳು, ಧನಿಯರಿಗೆ ಬೇಕಾದವರು, ಹಂಗೀಕರು—ಸಾಲಾ ಸಾಲು ಅರಶಿನ ಪೆಟ್ಟಿಗೆಗೇನೆ ಓಟು ಹಾಕಿದರಯ್ಯ. "ನಾಗಯ್ಯ ಒಡೆಯರಲ್ಲದಿದ್ದರೆ ಈ ಜನ್ಮಕ್ಕೆ 'ಸೆಟ್ಟ'ರ ಕಾಂಗ್ರೆಸಿಗೆ ಜಯ ಎಂದೂ ಆಗುತ್ತಿರಲಿಲ್ಲ" ಎಂದು ಬಚ್ಚ ಪ್ರಮಾಣಮಾಡಿ ಹೇಳುತ್ತಾನೆ.

"ನಾಗಯ್ಯ ಧನಿಯರ ಹೆಸರು ಮಾಹಾತ್ಮಾ ಗಾಂಧಿಯವರ ತನಕವೂ ಮುಟ್ಟಲಿಕ್ಕೆ ಅಡ್ಡಿಯಿಲ್ಲ" ಎಂದು ಬಚ್ಚನ ಖಾತ್ರಿಯಾದ ನಂಬಿಕೆ.



# ೩. ಜನ್ನ ಪೈಗಳು

ನಮ್ಮೂರಿನ ವ್ಯಾಪಾರದ ವಿಷಯವನ್ನು ಹೇಳುವಾಗ 'ಜನ್ನ ಪೈಗಳು' ಎಂದರೆ ಮುಗಿಯಿತು. ಊರವರು, ಎಲ್ಲರೂ ಅವರನ್ನು ಸಾಹುಕಾರ ಜನ್ನ ಪೈಗಳು ಎಂಬ ವಿಶೇಷಣ ಹಚ್ಚಿಯೇ ಕರೆಯುವುದು ರೂಢಿ. ನಾಗಯ್ಯನಂಥ ಸಮೀಪದ ಸ್ನೇಹಿತರೂ ಜನ್ನ ಪೈಗಳು ಎಂದು ಕರೆಯುತ್ತಾರೆ. ತೀರ ಕೆಳಗಿನ ಮಟ್ಟದವರು 'ಸಾಹುಕಾರರು' ಎಂದುಬಿಡುತ್ತಾರೆ. ನಮ್ಮೂರಿನ ಮಟ್ಟಿಗೆ, ಬರಿದೆ 'ಸಾಹುಕಾರರು' ಎಂದರೆ, ಅದು ಜನ್ನ ಪೈಗಳನ್ನು ಸಂಭೋಧಿಸಿಯೇ—ಎಂದು ತಿಳಿಯಿರಿ, ನಮ್ಮೂರಿಗೆ ಗಣ್ಯರಾದ ಇತರ ಸಾಹುಕಾರರು ಇದ್ದಾರೆ ಎನ್ನುವ ಹಾಗಿಲ್ಲ. ಹಾಗೆ ಅಂಗಡಿ ಕದ ತೆರೆದು, ರಾತ್ರಿಗೆ ಚಿಮಿಣಿಯನ್ನೋ ಪೆಟ್ರೊಮ್ಯಾಕ್ಸನ್ನೋ ಉರಿಸುವವರು ಇಲ್ಲವೆಂದಲ್ಲ. ಆದರೆ ಅಷ್ಟಕ್ಕೇನೆ ಯಾರಾದರೂ ಸಾಹುಕಾರರಾಗುತ್ತಾರೆಯೇ?

ಜನ್ನ ಪೈಗಳು ನಮ್ಮೂರಿನ 'ಗಟ್ಟಿ ಕುಳುವಾರು'ಗಳಲ್ಲಿ ಒಬ್ಬರು. ಇನ್‌ಕಮ್‌ಟ್ಯಾಕ್ಸ್ ಕೊಡುವಂಥ ಭಟರು. ಆದರೆ ಅವರನ್ನು ಕಾಣುವಾಗ ಇವರು ಇನ್‌ಕಮ್‌ಟ್ಯಾಕ್ಸ್ ಕೊಡುತ್ತಾರೆಯೇ ಎಂದು ಟ್ಯಾಕ್ಸ್ ಇನ್ಸ್‌ಪೆಕ್ಟರರೇ ವಿಸ್ಮಯಗೊಂಡರಂತೆ. ಜನ್ನ ಪೈಗಳು ನಮ್ಮೂರಿಗೆ ಬಂದು, ಸಾಹುಕಾರರಾಗಿ ಇಂದಿಗೆ ಇಪ್ಪತ್ತು ವರ್ಷವಾದುವು. ಅವರಿಗೆ ಬುದ್ಧಿ ತಿಳಿಯುವಾಗ, ಅಂದರೆ ಪ್ರಾಯ ಬಂದಲಾಗಷ್ಟೆ,ನಮ್ಮ ಊರಿಗೆ ಕಾಲಿರಿಸಿದರು.ಸೀತ್ರೈತಾಳರು ಎನ್ನುವಂತೆ—ಒಂದು ಪಂಚೆಯನ್ನು ಅರ್ಧ ಕೌಪೀನ, ಅರ್ಧ ಧೋತ್ರವಾಗಿ ಉಟ್ಟು ಬಂದವರು. ಬಂದವರು, ನಮ್ಮ ಆಗಿನ ಕಾಲದ ಪ್ರಸಿದ್ಧ ಸಾಹುಕಾರರಾದ ನಾರಾಯಣ ಪ್ರಭುಗಳಲ್ಲಿ ಬರವಣಿಗೆಗೆ ನಿಂತರು.ಇವರ ಮುತ್ತಿನಂತಹ ಅಕ್ಷರವನ್ನು ಕಂಡು, ಪ್ರಭುಗಳು, 'ಚಿಂತೆ ಇಲ್ಲ ಈ ಹುಡುಗ' ಎಂದು ಸಮಾಧಾನ ತಾಳಿದರು. ಆಗಿನ ದಿವಸದಲ್ಲಿ ನಾರಾಯಣ ಪ್ರಭುಗಳ ವ್ಯಾಪಾರವೆಂದರೆ 'ಏನುಂಟು ಏನಿಲ್ಲ' ಎನ್ನುವ ಹಾಗಿಲ್ಲ. ಅವುಗಳಲ್ಲಿ ಜವಳಿ, ಜಿನಸು, ಬತ್ತ—ಮುಖ್ಯವಾಗಿದ್ದುವು. ಪ್ರಭುಗಳ ಮನೆಯಲ್ಲಿ ತಮ್ಮವರು ಎಂಬವರಿರಲಿಲ್ಲ. ಹೀಗಾಗಿ ಜನ್ನುವಿನಂಥ ಒಬ್ಬ ನೌಕರ ಅವರಿಗೆ ಅವಶ್ಯವಿದ್ದ. ಮುಖ್ಯವಾಗಿ ಲೆಕ್ಕಪತ್ರ ನೋಡಿಕೊಂಡಿರಲಿಕ್ಕೆ; ಅವರು ಬಂಡಸಾಲೆಗೆ ಹೋದಾಗ

ಮಳಿಗೆ ನೋಡಲಿಕ್ಕೆ; ಮಳಿಗೆಗೆ ಹೋದಾಗ ಬಂಡಸಾಲೆಯನ್ನು ನೋಡಿ ಕೊಂಡಿರಲಿಕ್ಕೆ.

ಜನ್ನುವಿನ ಹುಟ್ಟೂರು ಮೂಲ್ಕಿಯ ಸಮೀಪವಂತೆ. ಮನೆಯಲ್ಲಿ ಅಣ್ಣನೇ ಯಜಮಾನ; ಅತ್ತಿಗೆ ಯಜಮಾನಿ. ಅಲ್ಲಿ ಅತ್ತಿಗೆಯ ಕಾಟ ಸಹಿಸ ಲಾರದೆ, ಅಣ್ಣನಿಗೆ ಹೇಳದೆ, 'ಬಡಗಲಾಗಿ' ಹೋಗಿ ಅದೃಷ್ಟ ಪರಿಶೀಲಿ ಸುತ್ತೇನೆಂದು ಹೊರಟವನಂತೆ ಅವನು. ಆಗ ಬಂದವನು ತಿರುಗಿ ಊರಿಗೆ ಹೋದುದು ಇಲ್ಲ. ನಮ್ಮ ಊರೇ ಅವನ ಊರೂ ಆಯಿತು; ನಾರಾಯಣ ಪ್ರಭುಗಳು ಅವನ ಸಾಕುತಂದೆಯಾದರು. ಅವನಿಗೆ ಊಟ,ಅರಿವೆ ಹೋಗುತ್ತ ವರ್ಷಕ್ಕೆ ಮೂವತ್ತು ರೂಪಾಯಿ ಧಾರಾಳ ವೇತನ ನಿಶ್ಚಯಿಸಿದರು. ನಾಲ್ಕು ವರ್ಷಕಾಲ ಅದೇ ರೀತಿಯಿಂದ ನಡೆಯಿತು. ಪ್ರಭುಗಳು ಹುಡುಗನ ವಿಷಯ ದಲ್ಲಿ, ಆತನ 'ಏಕೀನಿ'ತನವನ್ನು ಮೆಚ್ಚಿಹೋದರು. ಅವರ ಹೆಂಡತಿ, ಸಂತತಿ ಯಿಲ್ಲದುದರಿಂದ, ಜನ್ನುವನ್ನು ಮಗನಾಗಿಯೇ ತಿಳಿದುಕೊಂಡರು.

ಪ್ರಭುಗಳಿಗೆ ವಯಸ್ಸು ಆಗಿದ್ದುದರಿಂದ ಅವರು ತೀರಿಕೊಂಡರು; ಅವರ ವ್ಯಾಪಾರ ಕಷ್ಟಕ್ಕೆ ಗುರಿಯಾಯಿತು. ಹುಲಿಯ ಹುಣ್ಣು ಸತ್ತ ಮೇಲೆ ತಿಳಿಯುತ್ತದೆ ಎಂಬಂತೆ, ಪ್ರಭುಗಳಿಗಿದ್ದ ಸಾಲಮೂಲಗಳ ಲೆಕ್ಕ ಹೊರಗೆ ಬಂದಿತು; ಮೂಲವೆಲ್ಲ ಸಾಲಗಾರರ ವಶವಾಯಿತು. ನಂಬಿಕೆಯಿಂದ ಬಿಟ್ಟ ಜನ್ನುವಿನ ಮೂರು ವರ್ಷಗಳ ವೇತನವೂ ದಿಕ್ಕಿಲ್ಲದೆ ಮುಳುಗಿತು. ಇತ್ತ ಬಹಳ ಸಮಯದಿಂದ ತನ್ನನ್ನು ಮಗನಂತೆ ಕಂಡ ಪ್ರಭುಗಳ ಹೆಂಡತಿಯನ್ನು ಜನ್ನು ಸಾಕಿ ಬಂದನು. ಮುಂದೆ ಅವರಿಗೆ ಬೇಸರಿಕೆ ಹುಟ್ಟಿ, ಹಳ್ಳಿಯಲ್ಲಿದ್ದ ತಮ್ಮ ತಂಗಿಯ ಮನೆಯನ್ನು ಸೇರಿಕೊಂಡರು. ಜನ್ನು ತಿರುಗಿ ಒಬ್ಬಂಟಿಗ ನಾದ. ಆದರೆ ಪಡೆದ ವ್ಯಾಪಾರದ ಮಾಹಿತಿ ಎಲ್ಲಿ ಹೋದೀತು? ಮರುದಿವ ಸದಿಂದಲೇ ನೀರಿಗೆ ಬಿಟ್ಟ ಮೀನಿನಂತೆ ವ್ಯಾಪಾರದ ಕಸುಬನ್ನು ತೊಡಗಿದ.

ಅದೇ ಊರಲ್ಲಿ ತಾನು ಒಂದು ದಿವಸ ಸಾಹುಕಾರನಾಗಿ ಮೆರೆದೇನು ಎಂಬ ಛಲ ಜನ್ನುವಿನ ಮನಸ್ಸಿನಲ್ಲಿದ್ದಿತ್ತು. ಆದುದರಿಂದಲೇ ಮೊದಲಿಗೆ ಅವರ ಈಗಿನ ಬಂಡಸಾಲೆಯ ಸ್ಥಳದಲ್ಲೇ ಒಂದು ತಾವನ್ನು ಹಿಡಿದು, ಚಿಕ್ಕ ಒಂದು ಚಾವಡಿಯನ್ನು ಹಾಕಿ, ಅಲ್ಲಿ ವ್ಯಾಪಾರಕ್ಕೆಂದು ಕುಳಿತ. ಮೊದಲಿಗೆ ತೆರೆದುದು ಗೆಣಸಿನ ಅಂಗಡಿ. ಅದರ ಬೆಂಗಡೆ–ಬೆಂಕಿಪೆಟ್ಟಿಗೆ, ಸಾಬೂನು, ಉಪ್ಪು, ಹುಳಿಗಳೆಲ್ಲ ಕ್ರಮವಾಗಿ ಸೇರಿ, ದಿನಕ್ಕೆ ಆರೆಂಟು ಆಣೆ

ಗಳ ವ್ಯಾಪಾರವಾಗುವ ಅಂಗಡಿಯಾಯಿತು. ನಾಲ್ಕು ವರ್ಷಗಳ ಅವಧಿಯಲ್ಲಿ ಅವನು ಚಿಕ್ಕ ಪ್ರಮಾಣದಲ್ಲಿ ಹಳ್ಳಿಯವರಿಂದ ಬತ್ತವನ್ನು ಕೊಂಡು ಮಾರುವುದೂ ಕಂಡಿತು. ಆರನೆಯ ವರ್ಷದಲ್ಲಿ ಅಂಗಡಿಯು ಅನೇಕ ಚಿಲ್ಲರೆ ಸಾಮಾನುಗಳ ಜತೆಯಲ್ಲಿ ನಾಲ್ಕು ಥಾನು ಬಟ್ಟೆ, ನಾಲ್ಕು ಕಪ್ಪು ಸೀರೆಗಳೂ ಬಂದುಸೇರಿದುವು. ಅಲ್ಲೇ ಹತ್ತು ಸೆಂಟ್ಸು ಜಾಗವನ್ನು ಮೂಲಗೇಣಿಗೆ ಪಡೆದುಕೊಂಡು, ಒಂದು ಮನೆಯನ್ನೂ ಕಟ್ಟಿದ. ಆತನೇ ತನ್ನ ಕೈಯ್ಯಿಂದ ಮಣ್ಣು ಕಡಿದು, ಕಲಸಿ, ಗೋಡೆ ಇರಿಸಿದುದನ್ನು ಕಂಡವರಿದ್ದಾರೆ.

ಅನಂತರ 'ಜನ್ನು' ಹೋಗಿ ಜನ್ನ ಪೈಗಳಾಗುವ ಕಾಲಬಂದಿತು. ಆತನಿಗೆ ಚಿಕ್ಕಂದಿನಿಂದ ಯಕ್ಷಗಾನವೆಂದರೆ ಪ್ರೀತಿ. ಹೀಗಾಗಿ ಸಣ್ಣ ತೆರನಲ್ಲಿ ಭಾಗವತ ಜನ್ನಪೈಯೂ ಅನಿಸಿದನು. ಮೊದಲೇ ಸುರಿತ ಬರಹ; ಜತೆಗೆ ಅನುಭವವೂ ಬೆರೆತು, ನಮ್ಮೂರಿನ ಬರಹಗಾರನಾದ. ಜನರು ಚಿಕ್ಕ ಪುಟ್ಟ ದಸ್ತಾವೇಜು, ನೋಟು ಮೊದಲಾದುವುಗಳ ಅನುಭವಕ್ಕೂ, ಒಕ್ಕಣೆಗೂ ಅವನ ಬಳಿಗೆ ಬರತೊಡಗಿದರು. ಈಗ ಯಾರೇ ಇರಲಿ–'ಜನ್ನ ಪೈಗಳಲ್ಲಿ ಒಂದು ಮಾತು ಕೇಳಿಯೇ ಬರೆಯಿಸುವ' ಎನ್ನುವ ವಾಡಿಕೆ ಬಂದಿದೆ.

ಪೈಗಳ ವ್ಯಾಪಾರ ವಹಿವಾಟಿನ ಸುದ್ದಿಯೆಲ್ಲವನ್ನು ಹೇಳುತ್ತ ಹೋದರೆ ಬಹಳ ಉಂಟು; ನಿಮಗೂ ಕೇಳಿ ಬೇಸರವಾದೀತು. ಅವರು ಒಮ್ಮೆ 'ನಿಂತರು' ಅಂದಮೇಲೆ ಆ ವ್ಯಾಪಾರದಲ್ಲಿ ಓಡತೊಡಗಿದರೇ ಎನ್ನಬೇಕು. ಇವತ್ತಿಗೆ, 'ಆಡು ಮುಟ್ಟದ ಗಿಡವಿಲ್ಲ' ಎನ್ನುವ ಹಾಗೆ, ಎಲ್ಲ ವಿಧದ ವ್ಯಾಪಾರಗಳೂ ಅವರಿಗಿವೆ. ಯಾವ ವ್ಯಾಪಾರವೇ ಇರಲಿ, ಅವರ ಕೈಯ್ಯಿಂದಲೇ ಆಚೀಚೆ ದಾಟಿ ಸರಿಯಬೇಕು. ಬತ್ತ, ಜಿನಸು, ಜವಳಿ, ಬಿದಿರು, ಮೋಪು, ಅಣಿಲೆ, ಸೀಗೆ–ಎಂದು ಯಾವತ್ತು ಸಾಮಾನು ಸರಂಜಾಮು ಅವರ ಮೂಲಕವಾಗಿ ಸಾಗಿ ಸರಿಯಬೇಕು. ಈಗ ನಾಲ್ಕು ಮಂದಿ ಕೆಲಸಾಳುಗಳು ಕೆಲಸಕ್ಕಿದ್ದಾರೆ; ಒಬ್ಬರು ಗುಮಾಸ್ತರರಿದ್ದಾರೆ. ಮೊನ್ನೆಯ ತನಕವೂ ಎತ್ತಿನ ಗಾಡಿಗಳಿದ್ದುವು. ಇವತ್ತು ಅವನ್ನೆಲ್ಲಾ ತೆಗೆದು, ಸಾಮಾನು ಸಾಗಿಸಲು ಒಂದು 'ಲಾರಿ'ಯನ್ನು ಇರಿಸಿ ಬಿಟ್ಟಿದ್ದಾರೆ.

ಛೇ–ಮರೆತು ಬಿಟ್ಟೆ; ಪೈಗಳಿಗೆ ಹೆಣ್ಣು ತಂದ ವಿಚಾರವನ್ನು ಹೇಳಲಿಲ್ಲ. ಅದನ್ನು ಸೀತೈತಾಳರೇ ಹೇಳಬೇಕು. ನಾರ್ಣ ಪ್ರಭುಗಳಲ್ಲಿ ಜನ್ನು ಸೇರಿಕೊಂಡಾಗಿನಿಂದಲೂ ಸೀತೈತಾಳರಿಗೆ ಅವರ ಪರಿಚಯ. ಪ್ರಭುಗಳಿ

ದ್ದಾಗ ಐತಾಳರ ಕಟ್ಟೆಗಳಲ್ಲಿ ಅವರ ಅಂಗಡಿಯೂ ಒಂದಾಗಿತ್ತು. ಅವರು ಕಾಲವಾಗಿ, ಜನ್ನ ಪೈಗಳು ಸಾಹುಕಾರರಾದ ಬಳಿಕ, ಅವರ ಅಂಗಡಿಯೂ ಅದೇ ಸ್ಥಾನದಲ್ಲಿದೆ. ಜನ್ನ ಪೈಗಳು ಮನೆಯನ್ನು ಕಟ್ಟಿದ್ದೇ ತಡ, ಐತಾಳರು ಅವರನ್ನು ಕರೆದು "ಜನ್ನಪ್ಪ, ಮನೆಯೆಲ್ಲಾ ಕಟ್ಟಿ ಮುಗಿಯಿತಲ್ಲ. ಇನ್ನೂ ನೀನು ಇಷ್ಟು ದಿವಸದಂತೆ, ಕೈ ಅಡಿಗೆಯನ್ನೇ ಬೇಯಿಸಿ ತಿನ್ನಬೇಕೆ?" ಎಂದು ಕೇಳಿದರು. "ಮತ್ತೇನು ಮಾಡಲಿ, ಹೆಣ್ಣನ್ನು ಬೇಡಿಕೊಂಡು ನಾನೇ ಹೊರಡಲೇ? ನಮ್ಮೂರಿಗೆ ಹೋಗಬಹುದು. ಆದರೆ ಆ ದಿವಸ ಊರಿನ ಗಡಿ ಬಿಟ್ಟವನು, ಈಗ ಬರಿಯ ಒಂದು ಸಂಬಂಧಕ್ಕಾಗಿ ಅಲ್ಲಿಗೆ ಹೋಗುವುದು ಯಾತಕ್ಕೆ?" ಎಂಬ ಉತ್ತರ ಬಂದಿತು. ಜನ್ನು 'ಎಷ್ಟರ ಮಟ್ಟಿನ ತ್ರಾಣಿ' ಎಂಬ ವಿಷಯ ಸ್ವಜಾತಿಯವರಿಗೆ ತಿಳಿಯದು. ಇತ್ತ ಅವನ ಮೂಲದವರು ಯಾರು, ಏನು-ಎಂಬ ಪರಿಚಯವೂ ಇರಲಿಲ್ಲ. ಹೀಗಾಗಿ ಅಳಿಯನನ್ನು ಹುಡುಕುವ ಮಾವಂದಿರೊಬ್ಬರ ಕಣ್ಣಿಗೂ ಜನ್ನು ಕಾಣಿಸಲೇ ಇಲ್ಲ. ಆದರೆ ಐತಾಳರು ವಕೀಲಿ ವಹಿಸಿದ ಮೇಲೆ ಕೇಳಬೇಕೆ? ಮಾತುಕತೆಯಾದ ಆರು ತಿಂಗಳೊಳಗಾಗಿ ಸಾಲಿಗ್ರಾಮ ಮಾಧವ ಕಮ್ತಿಯರ ಮಗಳು ಅವರ ಮನೆಗೆ ಬರುವಂತೆ ಮಾಡಿದರು. ಕಾವೇರಮ್ಮ ಜನ್ನಪ್ಪರ ಲಗ್ನಕ್ಕೆ, ಐತಾಳರ ಹಿತೋಪದೇಶದಿಂದಾಗಿ ಮೂಲ್ಕಿಗೂ ಕಾಗದ ಹೋಗಿ, ಖುದ್ದು ಜನ್ನುವಿನ ಅಣ್ಣನೇ ದಿಬ್ಬಣ ಹೊರಡಿಸಿದ ಯಜಮಾನನಾಗುವಂತಾಯಿತು. 'ಜನ್ನು ಮತ್ತು ಕಾವೇರಮ್ಮರ ಜತೆಯೆಂದರೆ ಪಾರ್ವತಿ ಪರಮೇಶ್ವರರ ಹಾಗೆ' ಎಂದು ಐತಾಳರು ಆಗಾಗ ಅನ್ನುತ್ತಾರೆ. 'ಮುಖ್ಯ ದೈವಸಂಕಲ್ಪ; ಅದಿಲ್ಲದೆ ಯಾವುದೂ ಆಗಲಾರದು' ಎಂಬುದಕ್ಕೆ ಐತಾಳರಿಗೆ ದೊರಕಿದ ಬಲವಾದ ಸಾಕ್ಷಿಯೇ ಈ ಲಗ್ನ.

ಕಾವೇರಮ್ಮ ಬಡತನದಲ್ಲಿ ಬೆಳೆದವಳು. ಈಗ ಸಾಹುಕಾರರ ಹೆಂಡತಿಯಾದರೂ ಅಂಥ ಠೀವಿ, ಹಮ್ಮು ಯಾವುದೂ ಇಲ್ಲ. ಎಲ್ಲಾ ವಿಷಯಗಳೂ ಬೇಕು, ಎಲ್ಲವರೂ ಬೇಕು ಎಂಬ ಸ್ವಭಾವ ಅವರದ್ದು. ನಮ್ಮ ಊರಿನಲ್ಲಿ ಕಾವೇರಮ್ಮನ ಪರಿಚಯವಿಲ್ಲದ ಹೆಂಗಸರೇ ಇಲ್ಲ ಎನ್ನಬಹುದು. ಮನೆಯಲ್ಲಿ ಮೆದುವಿನ ಕೆಲಸಕ್ಕೆ ಬರುವ ಬತ್ತ ಕುಟ್ಟುವ ಹೆಂಗಸರನ್ನು ಮಾತನಾಡಿಸದೆ ಮನೆಗೆ ಕಳುಹಿಸುವವರಲ್ಲ. ಕತ್ತಲಾದರೂ, ಅವರನ್ನು ತಡೆದು ಹಿಡಿದು— 'ನಾಗೀ, ಐತಾಳರ ಮನೆಯ ಎಮ್ಮೆ ಈಗ ಹ್ಯಾಗಿದೆಯಂತೆ?' 'ರುಕ್ಕು, ಈ

ವರ್ಷ ನಿಮ್ಮ ಮನೆಯಲ್ಲಿ ಹಸಿಮೆಣಸು ಆಗಲಿಕ್ಕೆ ಸುರುವಾಗಲಿಲ್ಲವೇ? ಕಳೆದ ವರ್ಷ ರಾಶಿರಾಶಿಯಾಗಲಿಕ್ಕೆ ಸುರುವಾಗಿತ್ತು ಇದೇ ಹೊತ್ತಿಗೆ........ ಅಂದರೆ ನಮ್ಮ ಯಜಮಾನರಿಗೆ ಬೇಳೆ ತೊವೆ ಮಾಡುವ ಅಂದರೆ ಶುಂಠಿ ಉಂಟು, ಮೆಣಸು ಇಲ್ಲ....ಇನ್ನು ಸೋಮವಾರದ ಸಂತೆ ಬಂದೇ ಆಗಬೇಕು. ಅಷ್ಟರೊಳಗೆ ಸಿಕ್ಕಿದರೆ ಒಂದು ನಾಲ್ಕು ಹಸಿಮೆಣಸನ್ನು ತಂದು ಬಿಡು....' ಎಂದು ಒಬ್ಬೊಬ್ಬರನ್ನೇ ಮಾತನಾಡಿಸುತ್ತಾರೆ. ಹರಟೆಯ ಎಡೆಯಲ್ಲಿ, ನಾಗುವಿನಿಂದ ಅಕ್ಕಿಯಿಂದ ಕಲ್ಲುಗಳನ್ನು ಆರಿಸಿಯೂ ಆಯಿತು. ರುಕ್ಕುವಿನಿಂದ ತೆಂಗಿನೋಲೆಗಳ ಕಡ್ಡಿಗಳನ್ನು ಬೇರೆ ಮಾಡಿಸಿಯೂ ಆಯಿತು. ಲಚ್ಚಿಯಿಂದ ನೂರು ತೊಂಡೆಕಾಯಿಗಳಿಗೆ ಮಾತನ್ನು ಪಡೆದೂ ಆಯಿತು.

ರುಕ್ಕು, ಲಚ್ಚಿ ಇವರೆಲ್ಲರೂ ಮನೆಗೆ ಹೋಗುತ್ತ ಕಾವೇರಮ್ಮನ ಬಾಯಿಗೆ ಮರುಳಾಗಿ, ಕತ್ತಲು ಮಾಡಿಕೊಂಡು ಮನೆಗೆ ಬಂದು ತಮ್ಮ ಬುದ್ಧಿಯನ್ನು ತಾವೇ ದೂರಿಕೊಳ್ಳುತ್ತ, ಅತ್ತ ಅವರನ್ನು ಟೀಕಿಸುತ್ತ, 'ಅಲ್ಲ-ಕಾವೇರಮ್ಮನ ಬಾಯಿ ಎಂಥಾದ್ದು? ಮರದ್ದೇ? ಕಂಚಿನದೇ?ಎಂದು ಹಾಸ್ಯ ಮಾಡುವುದುಂಟು.

ಕಾವೇರಮ್ಮ ಗಟ್ಟಿಗಿತ್ತಿ. ಮನೆಗೆಲಸ, ಮನೆಯ ನಾಲ್ಕು ಜಾನುವಾರುಗಳ ಕೆಲಸ—ಇಷ್ಟೆಲ್ಲ ತಾವೊಬ್ಬರೇ ಮುಗಿಸಿ, ನಾಲ್ಕು ಮಾತಿಗೂ ಬಿಡುವು ಮಾಡಿಕೊಳ್ಳುವುದೆಂದರೆ ಸುಲಭವಲ್ಲ. ಇತ್ತ ಸಾಹುಕಾರರು ರಾತ್ರಿ ಒಂಬತ್ತು ಘಂಟೆಗೆ ಅಂಗಡಿಗೆ ಕದವನ್ನಿಕ್ಕಿ, ಬಚ್ಚಲಿಗೆ ಹೋಗಿ, ಒಂದು 'ಕಂಠಸ್ನಾನ' ಮಾಡಿ ರಾತ್ರಿ ಹತ್ತು ಘಂಟೆಗೆ ಸಮನಾಗಿ ಊಟಮಾಡುತ್ತಾರೆ. ಮಧ್ಯಾಹ್ನ ಅವರು ಒಳಗೆ ಬರುವಾಗ ಎರಡು ಘಂಟೆಯಾದರೂ ಕಳೆಯುತ್ತದೆ. ಅವರ ಊಟ ಮೂರು ಘಂಟೆಗೆ ಮೊದಲು ಮುಗಿದ ದಿವಸವೇ ಇಲ್ಲ.

ಏನೋ ಊರಿಗೆ ಮಳೆಗಾಲ ಬಂದರೆ, ಆಗ ಮಧ್ಯಾಹ್ನದ ಊಟ ಎರಡು ಘಂಟೆಗೆ ಮುಗಿಯುತ್ತದೆ. ಆದರೆ, ರಾತ್ರಿಯ ಊಟ ನಿಯಮದಂತೆಯೇ. ಮಳೆದಿವಸಗಳಲ್ಲಿ, ಅವರಲ್ಲಿ ವ್ಯಾಪಾರ ಕಡಿಮೆಯಾದರೂ ಜನ ಕಡಿಮೆಯಿರುವುದಿಲ್ಲ. ಖುದ್ದು ಅವರೇ ವ್ಯಾಸಪೀಠದ ಮೇಲೆ ಭಾಗವತವನ್ನು ಇರಿಸಿ, 'ಕೇಳು ಜನಮೇಜಯಧರಿತ್ರೀ' ಎಂದು ಸಾಯಂಕಾಲ ನಾಲ್ಕಕ್ಕೋ ಐದಕ್ಕೋ ಹಾಡಲು ಕುಳಿತರೆ, ಮುಗಿಯುವಾಗ ಒಂಬತ್ತು ಘಂಟೆ. ಸೀತೈತಾಳರು ಓದುವ ಪೈಗಳಿಗಿದಿರಾಗಿ ಕಾಲ್ಬಿಗಿದು ಕುಳಿತು

ಅರ್ಥವನ್ನು ವಿವರಿಸುತ್ತಾರೆ. ಇಬ್ಬರೂ ಒಬ್ಬರನ್ನೊಬ್ಬರು ಹೊಂದಿಸಿ ಕೊಂಡು ಭಾರತ, ಭಾಗವತ ಓದುತ್ತಾರೆಂದರೆ—ಅದು ನಮ್ಮೂರಿನ ಅಪೂರ್ವ ನೋಟಗಳಲ್ಲಿ ಒಂದು, ಇಷ್ಟೆಲ್ಲ ಮುಗಿದ ಮೇಲೆ ಐತಾಳರೂ, ಬಂದವರೂ, ಸಾಹುಕಾರರೂ ಸೇರಿ, ಗ್ರಾಮ ಗ್ರಾಮಗಳ ಸುದ್ದಿ ಸೂರುಗಳ ವಿಷಯವಾಗಿ ದಿನಂದಿನದ ವಿಮರ್ಶೆ ಮಾಡಿ, ಅನಂತರ ಐತಾಳರು ಹೊರಟು ಹೋದ ಮೇಲೆ, ಸಾಹುಕಾರರು ತಮ್ಮ ಊಟಕ್ಕೆ ಏಳುತ್ತಾರೆ.

ಜನ್ನ ಪೈಗಳ ವಿಷಯದಲ್ಲಿ-ಕೆತ್ತಿ ಬರೆದಿರಿಸಬಹುದಾದಂಥ ಒಂದು ಸಂಗತಿಯೆಂದರೆ ಅವರ ಜೀವನ ಕ್ರಮ. ಹಿಂದೆ ನಮ್ಮೂರಿಗೆ ಬರುವಾಗ ಹೇಗಿದ್ದರೋ ತದ್ರೀತಿ ಇವತ್ತಿಗೂ ಇದ್ದಾರೆ. ಅದೇ ಮಾತು, ಅದೇ ಬಗೆ, ಅದೇ ಉಡುಗೆ, ಅದೇ ಅಲಂಕಾರ. ಆಗಿನ ದಿನ ಗುದ್ಲಿ ಛಾಪಿನ ಒಂದು ವಿಲಾಯತಿ ಸಾಬೂನು ತುಂಡಿನಿಂದ ಮೈಯ್ಯನ್ನು ಉಜ್ಜಿ ಮಿಾಯುತ್ತಿದ್ದರೆ, ಈಗಲೂ ಹಾಗೆ. ಆ ಮಾರ್ಕಿನ ಸಾಬೂನು ಸಿಗದುದಕ್ಕೆ ಟಾಮ್ಕೊ ಸಾಬೂನು ತುಂಡನ್ನು ಬಳಸುತ್ತಿದ್ದಾರೆ. ಆಗಲೂ ಲೆಕ್ಕಾಚಾರದಂತೆ ಮೂರು ಗಳಿಗೆ ಗೊಮ್ಮೆ ವೀಳ್ಯವಾದರೆ, ಈಗಲೂ ಅಷ್ಟೇ ವೇಳೆಗೆ, ಅಷ್ಟೇ ಪ್ರಮಾಣದಲ್ಲಿ ತಾಂಬೂಲ, ಆಗ ಉಡುತ್ತಿದ್ದ ರೀತಿಯಲ್ಲೇ ಈಗಲೂ ಪಂಚೆ ಉಡುತ್ತಾರೆ-ಅರ್ಧ ಪಂಚೆ, ಅರ್ಧ ಶಾಲು ಆಗುವಂಥ ರೀತಿಯಲ್ಲಿ. ಆಗಿಗೂ ಈಗಿಗೂ ಇರುವ ಒಂದು ವ್ಯತ್ಯಾಸವೆಂದರೆ 'ತಲೆಯಲ್ಲಿ ಬೆಳೆಯುತ್ತ ಬಂದಿರುವ ಜಡೆ.' ಅದು ಸುಲಕ್ಷಣದ ಗುರುತೆಂಬುದರಿಂದ, ದನದ ಕೊರಳಿಗೆ ತೂಗಿದ ಕೊದಂಟಿಯಂತೆ, ಬೆನ್ನಿಗೆ ಹತ್ತುಸಾರಿ ಬಡಿಯುತ್ತಿದ್ದರೂ, ಅದನ್ನು ಕತ್ತರಿ ಸುವ ಶೋಕಿಗೆ ಇಳಿಯಲಿಲ್ಲ.

ಸಾಹುಕಾರರ ವ್ಯಾಪಾರದ ರೀತಿಯನ್ನು ಕೇಳಲಿಕ್ಕೆ ರುಕ್ಕುವನ್ನೋ, ನಾಗುವನ್ನೋ ಮಾತನಾಡಿಸಬೇಕು.

"ಅಯ್ಯನ ಹತ್ತಿರ ಸೀರೆ ಖರೀದಿ ಮಾಡಬೇಕು—ಅಬ್ಬ, ಅಯ್ಯನ ಬಾಯಿಯೇ! ಅಸ್ಲೇ ಆರು ಪಾವಲಿಯೆಂತೆ! 'ರುಕ್ಕು, ನಿನಗಾದ್ದಕ್ಕೆ ಐದು ಪಾವಲಿಗೆ ಕೊಡುತ್ತೇನೆ. ಇದರ ಬಣ್ಣ ನೋಡು—ಹರಿದರೆ ಹೋಗಲಿಕ್ಕಿಲ್ಲ. ನವಾಯತರ ಅಂಗಡಿ ವ್ಯಾಪಾರ ಎಂದು ತಿಳಿಯಬೇಡ-ಹೇಳೋದು ಒಂದು, ಕೊಡೋದು ಮತ್ತೊಂದಲ್ಲ....ಏನು? ಕತ್ತರಿಸಲೇ ಹೇಳು! ಇದರಲ್ಲಿ ಜೋಡಿಯಿದೆ. ನಿನಗೆಷ್ಟು? ಒತ್ತೆಯಲ್ಲವೆ?...." ಹೀಗೆ ಹೇಳಲಿಕ್ಕೆ ಸುರು

ಮಾಡಿದರು ಅಂದರೆ ಇನ್ನೊಬ್ಬರಿಗೆ ಮಾತನಾಡಲಿಕ್ಕೆ ಎಡೆ ಕೊಡುವವರಲ್ಲ."

"ಮೊಳ?" ಎಂದು ಕೇಳುವುದೇ ತಡ-'ಹಿಡಿ, ಈ ತುದಿ ಹಿಡಿ' ಎಂದು ಸೆರಗನ್ನು ತಾವು ಹಿಡಿದು, ಇನ್ನೊಂದನ್ನು ನನ್ನ ಕೈಗೆ ತುರುಕಿಸಿ, ಸರಸರನೆ ಎದ್ದು ಮೊಳ ಹಾಕಿಯಾಯಿತು. ಅಬ್ಬ! ಏನು ಚಮತ್ಕಾರದ ಕೈ ಅವರದ್ದು. ಕಾಣಲಿಕ್ಕೆ ಅಷ್ಟು ಉದ್ದ ಉಂಟಲ್ಲ! ೧೨ರ ಮೇಲೆ ಇಗೋ ಒಂದು ಗೇಣು ಜಾಸ್ತಿ' ಎಂದು ತೋರಿಸಿಯೂ ಆಯಿತು. ಮನೆಗೆ ತೆಗೆದುಕೊಂಡು ಹೋಗಿ ಅವರೂ ನಾನೂ ಹಿಡಿದು ಅಳೆದರೆ, ಹತ್ತು ಮೊಳದ ಮೇಲೆ ಗೇಣು ಜಾಸ್ತಿಯಿಲ್ಲ!

"ಬಣ್ಣದ ಸುದ್ದಿ ಕೇಳುತ್ತೀರಾ? ಕೊಡಿ ಹಬ್ಬಕ್ಕೆ ತೆಗೆದುಕೊಂಡ ಸೀರೆ ಗೋಪಾಡಿ ಗೆಂಡಕ್ಕೆ ಚೂರಿಲ್ಲ. ಹಾಗೆಂದು ಅವರಲ್ಲಿಗೆ ಹೋಗಿ, ತೋರಿಸಿ, ಒಡೆಯರೇ, ಇದು ನೀವು ಕೊಡಿ ಹಬ್ಬದ ಮೂರು ದಿನದ ಮುಂಚೆ ಕೊಟ್ಟದ್ದು, ನೋಡಿ' ಎಂದು ತೋರಿಸಿದರೆ-'ಘಟಿಂಗರು ನೋಡು! ರುಕ್ಕು, ನಾವು ಬಣ್ಣ ಹಾಕುವಲ್ಲಿ ನಿಂತು ನೋಡಲಿಕ್ಕೆ ಬರುತ್ತದೆಯೇ? ಅವರ ಮಾತನ್ನು ನಂಬಿ ನಾವು ತರುವುದು; ನಂಬಿ ಖಾತ್ರಿ ರಂಗು ಅನ್ನುವುದು. ಈಗ ಅವರ ಮಾತನ್ನು ನಂಬಿದ್ದಕ್ಕೆ ನಿನ್ನಿಂದ ಮಾತು ಕೇಳುವುದಾಯ್ತು ರುಕ್ಕು. ಮುಂದಿನ ಸಾರಿಗೆ ಹಾಳು ತೀರ್ಪೂರು ಸೀರೆಯೇ ಬೇಡ ನಿನಗೆ ಜಲಗಂಟಾಪುರದ್ದೋ, ಕೊಮಾರ ಪಾಳೆಯದ್ದೋ ಹುಡುಕಿ ಕೊಡುತ್ತೇನೆ' ಎಂದು ಸಮಾಧಾನಪಡಿಸಿ ಕಳುಹಿಸುತ್ತಾರೆ.

"ಬತ್ತ ಅಳೆಯಲಿಕ್ಕೆ ಸಾಹುಕಾರರೇ ಬೇಕು. ಆ ಕಳಸೆ, ಆ ಕೋಲು ಆ ಕೈ........ಎಲ್ಲಾ ಒಂದೇ ಕೂಟ. ಕೇಳಿದರೆ, 'ಸರಕಾರದ ಮೊಹರು ಇದೆ ನೋಡು' ಎನ್ನುತ್ತಾರೆ. ಆದರೆ ಅವರು ತುಂಬಿಸಿ ಆಚೆಂದೀಚೆಗೆ ಮಾಡುವುದರೊಳಗೆ ಮನೆಯಿಂದ ಆರು ಕಳಸೆ ಎಂದೆಣಿಸಿ ತಂದ ಬತ್ತ, ಅಂಗಡಿಯಲ್ಲಿ ೫॥ ಆಗಲಿಕ್ಕೇನೆ ಹರಹರ" ಎನ್ನುತ್ತಾಳೆ ಲಚ್ಚಿ.

ನಾಗಿಯಿಂದಲೂ ಅವರಿಗೆ ಶಿಫಾರಸು ತಪ್ಪಿದ್ದಿಲ್ಲ. "ಆದರೆ ಅಯ್ಯ ಎಂಥದನ್ನೂ ಮಾಡಲಿ; ಏನೇ ವ್ಯಾಪಾರ ಇರಲಿ, ಒಂದು ಕ್ಷಣಕ್ಕೂ ಗಿರಾಕಿ ಮನಸ್ಸು ಮುರಿದು ಮಾತನಾಡುವವರಲ್ಲ. ಅಲ್ಲದೆ ಬಡವರ ಮಕ್ಕಳು ದೊಡ್ಡವರ ಮಕ್ಕಳು ಎಂಬ ಭೇದವೂ ಇಲ್ಲ; ಎಲ್ಲರೂ ಒಂದೇ ಸಮ.

ಏನಿಲ್ಲ-ನಾನು ಮೊನ್ನೆ ಹೋದವಳು ‘ಅಯ್ಯಾ, ಪಾವಾಣೆ ಹೊಗೆಸೊಪ್ಪು’ ಎಂದೆ. ಹೇಳಿದ್ದೇ ತಡ; ಬಂದರು, ತೆಗೆದು ಕೊಟ್ಟರು. ಎದುರಿಗೆ ಸೆಟ್ಟರ ರೂಪಾಯಿ ಲೆಕ್ಕಮಾಡುತ್ತಿದ್ದವರು, ರೂಪಾಯಿ ರಾಶಿ ಅಲ್ಲೇ ಬಿಟ್ಟು ಈಚೆ ಬಂದು, ಯಾಕೂ ಬೇಡದ ನನ್ನ ಒಂದು ಪಾವಾಣೆಯ ವ್ಯಾಪಾರ ಕೊಟ್ಟು ಕಳುಹಿಸಿದರು. ಆ ಮೇಲೆ ನಾಗೊಡೆಯವರು ಸಿಟ್ಟಾಗುತ್ತಾರೋ ಎಂದು ಸಮಾಧಾನ ಮಾಡಲಿಕ್ಕೆ ‘ಹೆಣ್ಣು ಹೆಂಗ್ಸು, ಒಬ್ಬಳೇ ಬಂದಿದ್ದಾಳೆ. ಕತ್ತಲೆಯಾಗುವುದರೊಳಗೆ ಮನೆಗೆ ಹೋಗಲಿ, ಎಂದು ಕಳುಹಿಸಿದೆ...ಎಷ್ಟಾಯಿತು: ೨೫೦ ಅಲ್ಲವೇ?’ಎಂದು ಮತ್ತೆ ರೂಪಾಯಿಗಳನ್ನು ಎಣಿಸಲಿಕ್ಕೆ ಸುರುಮಾಡಿದರು. ನನಗೆ ಎದೆ ಜಗ್ ಆಯಿತು. ಅಯ್ಯ ಅಂದರೆ ಬಂಗಾರದಂಥ ಅಯ್ಯ! ಸುಮ್ಮನೆ ಅನ್ನುವುದಲ್ಲ.”

ಜನ್ನ ಪೈಗಳ ಸ್ನೇಹ, ವ್ಯಾಪಾರ ಎರಡೂ ಸಮವೇ-ಒಮ್ಮೆ ತೊಡಗಿದವರು ಇವತ್ತಿಗೂ ನಡುವೆ ಬಿಟ್ಟವರಿಲ್ಲ. ಅವರ ಅಂಗಡಿ ಎದುರು ಸೇಲಂಕಾರರ ಅಂಗಡಿ ಮೂರು ಸಾರಿ ಬಿತ್ತು; ಆದರೆ ಒಂದೂ ಬಹುಕಾಲ ನಡೆಯಲಿಲ್ಲ. ಬಾಯಿಯಲ್ಲಿ ಬೇಕಾದರೆ ನಮ್ಮ ಶಂಕರ ಹೊಳ್ಳರಂಥವರು ‘ಜವಳಿ’ ಎಂದು ಅವರನ್ನು ಟೀಕಿಸಿದರೂ ವ್ಯಾಪಾರಕ್ಕೆ ಹೋಗುವುದು ಅದೇ ಪೈಗಳಲ್ಲಿಗೇ, ಅಲ್ಲವಾದರೂ ಈಗಿನ ದಿವಸದಲ್ಲಿ ಕುಳ ನೋಡಿ, ಸಾಲಕೊಟ್ಟು, ನಡೆಯಿಸಿಕೊಂಡು ಹೋಗುವ ಯೋಗ್ಯತೆ ಎಷ್ಟು ಜನರಿಗಿದೆ?



# ೪. ಮೀಸೆ ಸುಬ್ಬ

ಕಾಳಿಂಗಯ್ಯನ ಆಸ್ತಿಯನ್ನು ಶೀನಪ್ಪ ಸೇರೆಗಾರರು ಸ್ವಾಧೀನಪಡಿಸಿಕೊಂಡ ಕಥೆಯು ಒಂದು ರಾಮಾಯಣವೇ ಆಗಿಬಿಟ್ಟಿತು. ಹೋ! ಆ ದಿವಸ ಸರಕಾರಿ ರಸ್ತೆಯಲ್ಲಿ ಸಂತೆಯ ದಿನ ತಿರುಗಾಡದಷ್ಟು ಜನರು ತಿರುಗಾಡಿದ್ದಾರೆ. ಶೀನಪ್ಪ ಸೇರೆಗಾರರ ಜನರು ಬೆಳಗಿಗೆ ಮೊದಲೇ ಆಸ್ತಿಯ ನಾಲ್ಕು ಸುತ್ತು ನಿಂತಿದ್ದರು. ಅಮೀನರು 'ಕೂ' ಎಂದು ಕರೆದರೆ ನೂರು ಮಂದಿ ದೊಣ್ಣೆ ಹಿಡಿದುಕೊಂಡು ಬರಲು ಸಿದ್ಧರಿದ್ದರು. ಇದು ನರಹುಳುವಿಗೂ ತಿಳಿದಿರಲಿಲ್ಲ–ಎನ್ನುತ್ತಾರೆ. ಬವಲು ಊರಿನ ಗದ್ದಲವೇ ಬೇರೆಯಾಗಿತ್ತು. ಊರಲ್ಲಿ "ಇವತ್ತು ಶೀನಪ್ಪ ಸೇರೆಗಾರರ ಆಸ್ತಿ, ಆಸ್ಥಿ ಎರಡೂ ಪರಾಧೀನವಾಗುತ್ತದೆ" ಎಂದು ತಾರೀಪುಮಾಡುತ್ತ ತಿರುಗುವವರೇ ಎಲ್ಲರು. ಮರುದಿವಸಕ್ಕೆ ಮುಂಚಿತವಾಗಿಯೇ ನಾಗಯ್ಯ ಸೆಟ್ಟರು "ಕಾಳಿಂಗಯ್ಯನ ಮೈಮುಟ್ಟುವವರು ಬರಲಿ, ನೋಡುವ" ಎಂದು ಸಾರುತ್ತಿದ್ದುದೇ ಇದಕ್ಕೆ ಕಾರಣ. ಅಲ್ಲದೆ ಹೊತ್ತು ಮೂಡುವುದಕ್ಕೆ ಸರಿಯಾಗಿ ಅವರ ಸೇನಾನಿ ಬಚ್ಚ, ಅಣ್ಣು ಮೊಡಲಾದ ಭಟರು,ಕಂಕುಳಲ್ಲಿ ದೊಣ್ಣೆ ಸಿಕ್ಕಿಸಿಕೊಂಡು ರಾಮಾರೂಢಿಯಾಗಿ 'ಬರುವವರೆಲ್ಲ ಬರಲಿ' ಎಂದು ಕೊಚ್ಚುತ್ತಿದ್ದರು-ಎಂದಮೇಲೆ ಹೇಳಲೇನಿದೆ? "ಅಮೀನರಿಗೇನು ಜೀವ ಭಾರವಾಗಿದೆಯೇ?" ಎಂದು ಬಚ್ಚ ಸಾರಿದ ಮಾತನ್ನು ಹಾದಿಯಲ್ಲಿ ಹೋಗುವವರೆಲ್ಲರೂ ಕೇಳಿದ್ದರು. ಆದರ ಮೇಲಿಂದಲೇ, ಅಮೀನಗು ಕಾಳಿಂಗಯ್ಯನ ಕಿಸೆಗೆ ಬಿದ್ದಿರಬೇಕು–ಎನ್ನುವ ಪುಕಾರು ಸ್ವಾಭಾವಿಕವಾಗಿಯೇ ಊರಲ್ಲಿ ಹುಟ್ಟಿಕೊಂಡಿತು.

ನಮ್ಮ ಊರವರೋ? ಬಹಳ ಜಾಣರಯ್ಯ. ಅಲ್ಲಿ, ಇಲ್ಲಿ ಹದ್ದಿನ ಹಾಗೆ ಇಣುಕುವವರೇ ಎಲ್ಲ. ಯಾರುಯಾರ ಪಂಗಡ ಎನ್ನುವುದು ಕಷ್ಟ. "ಯಾರ್ಯಾರ ನಂಬ್ರದಲ್ಲಿ ನಾವು ಸಾಕ್ಷಿಗೆ ಸಿಕ್ಕಿ ಸಾಯುವುದು ಬೇಡ" ಎಂದು ಬಾಯ್ದೆರೆದು ಹೇಳಿದರೂ, "ಕಾಳಿಂಗಯ್ಯನ ಎಲುಬು ಹುಡಿಯಾಗುತ್ತದೆ ಇವತ್ತು" ಅನ್ನುವವರು ಕೆಲವರು. "ಶೀನಪ್ಪನ ಮೀಸೆಕೂದಲು ಎಷ್ಟು ಉಳಿಯುತ್ತದೆ ನೋಡಬೇಕು" ಎನ್ನುವವರು ಕೆಲವರು. ಆದರೆ ತೀರ ಸಮೀಪಕ್ಕೆ ಒಬ್ಬರೂ ಹೋಗಲಾರರು. ಎಲ್ಲರೂ ದೂರದಿಂದಲೇ ನಿಂತು, ಇಣಿಕಿ ನೋಡುವವರು.

ಲೆಕ್ಕಾಚಾರಕ್ಕೆ ಸಮನಾಗಿ ಎಂಬಂತೆ ಅಮೀನರು ಏನೂ ತಿಳಿಯದವರ ಹಾಗೆ, ಹೊತ್ತು ಮೂಡಿ ಜಾವ ಹೊತ್ತಿಗೆ ಸಮನಾಗಿ ಕಾಳಿಂಗಯ್ಯನ ಮನೆ ಅಂಗಣಕ್ಕೆ ಕಾಲಿಟ್ಟರು. ಜತೆಯಲ್ಲಿ ಶೀನಪ್ಪ ಸೇರೆಗಾರರು ಇದ್ದೇ ತೀರಬೇಕಲ್ಲ. ಬಂದವರು ಕೂಗಿ 'ಕಾಳಿಂಗಯ್ಯ' ಎಂದು ಘೂಂಕರಿಸಿದರು. ಅಲ್ಲಿಯೇ ಆಲೆದಾಡುತ್ತಿದ್ದ ಬಚ್ಚನ ಸವಾರಿ ಮುಂದೆ ಬಂದು, "ಅಮೀನರೇ, ಕಾಳಿಂಗಯ್ಯ ಗೀಳಿಂಗಯ್ಯ ನಮಗೆ ತಿಳಿಯದು. ಈ ಶೀನಪ್ಪ ಸೇರೆಗಾರ ಬೇಕಾದರೆ ಇಲ್ಲಿರಲಿ; ನೀವು ನಿಮ್ಮ ಮನೆಗೆ ನಡೆಯಿರಿ. ನೀವು ಸುಮ್ಮನೆ ಕುಂದಾಪುರದಿಂದ ಇಲ್ಲಿಗೆ ಬಂದು ಪ್ರಾಣ ಬಿಡುವುದು ಯಾಕೆ!" ಎಂದನು. ಅಮೀನರು ಬೆಪ್ಪಾಗಿ ನಿಂತು ನೋಡುವುದರೊಳಗೇನೆ ಒಬ್ಬ "ಹೂಂ, ಜಟಪಟ ಹೊರಟುಬಿಡಿ. ಕ್ಷಣ ಹೆಚ್ಚುಕಡಿಮೆಯಾದರೆ ನೆಲ ಕೆಂಪಾಗುವುದೇ ಸಮ. ಆಮೇಲೆ ನಮ್ಮನ್ನು ದೂರಕೂಡದು. ಆಸ್ತಿ ಈ ಜನ್ಮಕ್ಕೆ ಸ್ವಾಧೀನ ಸಿಗಲಿಕ್ಕಿಲ್ಲ, ತಿಳಿಯಿತೇ?" ಎಂದು ಆರ್ಭಟಿಸಿದ. ಅದಕ್ಕೆ ಅಮೀನರು ಚಂದವಾಗಿ ಪ್ರತಿ ಮಾತನಾಡಿದರು: "ಯಾರು ನೀನು? ಕಾಳಿಂಗಯ್ಯನವರು ಮನೆಯಲ್ಲಿದ್ದಾರೋ ಎಂದು ಕೇಳಿದರೆ, ಇಷ್ಟು ಹಾರುವುದೇತಕ್ಕೆ? ಶೀನಪ್ಪ ಸೇರೆಗಾರರ ಆಸ್ತಿ ಅವರಿಗೆ ಹೋಗುವುದಾದರೆ ಅದಕ್ಕೆ ದೊಣ್ಣಪ್ಪನಾಯ್ಕನ ಅಂಕೆಯೇ?" ಎಂದು ಕೇಳಿದರು.

ಬಚ್ಚನ ಪಿತ್ಥ ನೆತ್ತಿಗೆ ಅಡರಿತು. ಆದರೆ ಅಮೀನರ ತಳ್ಳಿಗೆ ಹೋಗಬಾರದೆಂದು ಯಜಮಾನರ ಕಟ್ಟಪ್ಪಣೆಯಾಗಿದ್ದುದರಿಂದ .... "ನಿಮಗೆ ಬೇಡ" ಎಂದು ಮುಗಿಸಿದನು.

"ನನಗೆ ಬೇಡ ಅಂದರೆ, ಸರಕಾರದ ಕಡೆಯಿಂದ ಬಂದವನು ನಾನು."

"ಸರಕಾರ ಗಿರಕಾರ ಎಲ್ಲ ಆಚೆಗಿರಲಿ; ನಮಗೇನು ಸರಕಾರ ಗೊತ್ತಿಲ್ಲದ್ದಲ್ಲ. ಈಗ ಬಂದ ಹಾಗೆ ನೀವು ಹಿಂದೆ ಹೋಗಿ ನೋಡುವ."

ಅಮೀನರಿಗೆ ಕೋಪವೇರಿತು. "ನಿನಗೆ ತಿಂದದ್ದು ಕಣ್ಣಿಗೇರಿದೆ" ಎಂದು ಗದರಿಸಿದರು. ಬಚ್ಚನಿಗೂ ಮೂಗು ಅರಳಿತು ಕೈ ಎತ್ತಿದ ಆತ, ಶೀನಪ್ಪ ಸೇರೆಗಾರರು ಗಾಬರಿಯಾಗಿ 'ಅಯ್ಯೋ' ಎಂದು ಕಿರುಚಿದರು. ಸರಿ, ಹಾದಿಯ ಮರೆಯಲ್ಲಿ ಅವಿತುಕೊಂಡಿದ್ದ ಒಂದು ಪಟಲಾಮು ಹೊರಗೆ ಬಂದಿತು. ಎದುರಿಗೇನೆ ದಾಂಡಿಗ ಆಳು 'ಮೀಸೆ ಸುಬ್ಬ'! ಹಿಂದೆ ಒಂದು ಐವತ್ತಿನೂರು ಮಂದಿ. ಎಲ್ಲರ ಕೈಯ್ಯಲ್ಲೂ ಮೂರ್ತೆ ಮಾಡುವ ಕತ್ತಿಗಳಿದ್ದುವು.

ಅವರನ್ನು ನೋಡಿದ್ದೇ ನೋಡಿದ್ದು, ಅಣ್ಣ ಬಚ್ಚಂದಿರು ಬಾಲಮುದು ಚಿಯೇ ಬಿಟ್ಟರು. ಮೀಸೆ ಸುಬ್ಬ ಧೈರ್ಯವಾಗಿ ಮುಂದಕ್ಕೆ ಬಂದು, ಮನೆ ನುಗ್ಗಿ ಆ ಕಾಳಿಂಗಯ್ಯನನ್ನು ಹೊರಕ್ಕೆ ಎಳೆದು, "ಹೇಗಸರು ಒಳಗಿದ್ದಾರೆ ತಣ್ಣಗೆ ಹೊರಗೆ ಹೊರಡಲಿ. ಅವರ ತಂಟೆಗೆ ನಾವೇನೂ ಬರುವವರಲ್ಲ" ಎಂದನು.

ಕಾಳಿಂಗಯ್ಯ ತನ್ನ ಮನೆಯುವರನ್ನು ಹಿಂದಿನ ದಿನವೇ ತವರಿಗೆ ಸಾಗಿಸಿ ತಾನು ಒಂಟಿಯಾಗಿದ್ದ. ನೋಡುವ- ಎಂದು ಮೀಸೆ ಹುರಿಕಾಯಿಸಿಕೊಂಡು ಒಳಗಿಂದ ಬಚ್ಚನ ಶೌರ್ಯವನ್ನು ಇದಿರುಕಾಯುತ್ತಿದ್ದ ಅವನ ಮುಂದಕ್ಕೆ. ಸುಬ್ಬನ ಕಲ್ಲಿಮೀಸೆ ಕಾಣಿಸಿದ್ದೇ ತಡ; ಕುಸಿದು ನೆಲಕ್ಕಂತ ಮೂರು ಗೇಣು ಕೆಳಗೆ ತಗ್ಗಿಬಿಟ್ಟ.

ಆ ದಿನ ಹೊರಗೆ ಕಾದುಕೊಂಡು ಅಡಗಿ, ಇಣುಕುತ್ತಿದ್ದ ನಮ್ಮೂರಿ ನವರ ನಿರಾಶೆ ಹೇಳಿತೀರದು. ಅವರು ದೊಡ್ಡ ರಾಮಾಯಣ ನೋಡಲು ಬಂದವರು. ಅವರಲ್ಲಿ ಯಾರಿಗೆ ಗೆಲುವಾದರೂ ನಷ್ಟವಿಲ್ಲ. 'ಒಂದು ಮಾರಾ ಮಾರಿಯಾದರೆ ನೋಡುವ' ಎಂದು ಬಂದವರಿಗೆ, ಇದು ಇಷ್ಟರಲ್ಲೇ ಸಪ್ಪೆ ಯಾದುದನ್ನು ಕಂಡು ಉಂಟಾದ ನಿರಾಶೆ ಹೇಳಿತೀರದು. ಯಾವ ಹೆಚ್ಚಿನ ಗದ್ದಲವೂ ಆಗದೆ, ಆಸ್ತಿ ಶೀನಪ್ಪ ಸೇರೆಗಾರರ ಕೈಸೇರಿದುದನ್ನು ಕಂಡು ಎಲ್ಲರೂ 'ಅವನ್ಯಾರಣ್ಣ ಮೀಸೆ ಸುಬ್ಬ' ಎಂದು ವಿಸ್ಮಯಪಟ್ಟರು.

ಊರಲ್ಲಿ ಕೆಲವ ಗೆ ಮಾತ್ರ-ಮೀಸೆ ಸುಬ್ಬನ ಗುರುತು ಇದೆ. ನೋಡಿ ದವರು ಹಲವರಿರಬಹುದು. ಆದರೆ ಅವನ ಮೀಸೆಯ ಪ್ರತಾಪ ತಿಳಿದವ ರಿದ್ದಿಲ್ಲ. ಅದರಿಂದಾಗಿ ಹೇಳುತ್ತಿದ್ದೇನೆ- ಶೀನಪ್ಪ ಸೇರೆಗಾರರು ನಮ್ಮ ಊರಿನ ಸುತ್ತು ಮುತ್ತಲಿನ ಆರೆಂಟು ಕಳ್ಳು ಅಂಗಡಿಗಳ ಗುತ್ತೇಗಾರರು. ಸೇರೆಗಾರರು ಸೆರೆಗಾರರೂ ಆಗಿದ್ದರು. ಆದರೆ ವಾಸ್ತವಕ್ಕೆ ಈ ವಹಿವಾಟಿನ ಸಾಲಮೂಲ ಸೇರೆಗಾರರದ್ದಲ್ಲ. ಈ ಗುತ್ತೆಗೆ ನಿಜವಾಗಿಯೂ ನಿಂತವನು ಅಥವಾ ಎದುರಿಗೆ ಇವರನ್ನು ನಿಲ್ಲಿಸಿದವನು ಮೀಸೆ ಸುಬ್ಬ. ಅವರಿಗೂ ಸುಬ್ಬನಿಗೂ ಪ್ರಾಕಿನಿಂದಲೂ ಸ್ನೇಹ. ಅಡಚಣೆ ಬಿದ್ದಾಗ ಸೇರೆಗಾರರಲ್ಲಿಗೆ ಓಡಿ 'ಅಯ್ಯ ಬಂದಿದ್ದೇನೆ' ಅನ್ನುತ್ತಾನೆ. 'ಸಾಲ ಕೇಳಲು' ಎಂದೇ ಅರ್ಥ. ಅವನ ಕಡಕಟ್ಟಿಗೆ ನೋಟು, ದಸ್ತಾವೇಜು ಯಾವುದೂ ಬೇಕಿಲ್ಲ. ಎಲ್ಲವೂ ತಿಂಗಳು ತಿಂಗಳ ಲೆಕ್ಕ. ಈ ತನಕ ಸುಬ್ಬ ಪೂಜಾರಿ ಅವರ ಹಣವನ್ನು ತಿಂದ

ವಸೂ ಅಲ್ಲ; ತಿನ್ನುವ 'ಗಜೂರ್' ಅವನಿಗಿರಲಿಲ್ಲ. [illegible]ಅಂಗಡಿಗಳಿಂದಾಗಿ ಅವನಿಗೆ ಸಾವಿರ ಎರಡು ಸಾವಿರಗಳ ಮಟ್ಟಿಗೆ ಕಿಫಾಯತಿ ಉಂಟು ಎನ್ನುತ್ತಾರೆ. ಮೊದಲಿನಿಂದಲೂ ಅವನಿಗೆ ಸೇಂದಿ ಗುತ್ತೆ ಕಂಟ್ರಾಕ್ಟು. ಆದರೆ ಈ ವರ್ಷ ಯಾರೋ ತೆಂಕಲಾಗಿನವರು ಬಂದು, ಅವನ ಎದುರಿಗೆ 'ಕೊಂಪಿಟೀಶನಿಗೆ ನಿಲ್ಲುತ್ತೇನೆ' ಎಂದು ಹೇಳಿದರಂತೆ. ಹಾಗಾದರೆ ತೆಂಕಿನ ಮಲೆಯಾಳಿ ಬೆಳಿಚಪ್ಪಾಡರು ಬಂದು ನಮ್ಮ ಊರಿನ ಬಿಲ್ಲವರ ಬಾಯಿಗೆ ಮಣ್ಣು ಬೀಳುವಂತಾಗುತ್ತಿತ್ತು. ಇತ್ತ ಸುಬ್ಬನಿಗೆ ಆಸ್ತಿಯಿದ್ದರೂ, ಸಾಗುವಳಿ ಮಾಡಿಸಿ ತಿಳಿಯದು. ಆದುದರಿಂದ ಎದುರಿಗೆ ಶೀನಪ್ಪ ಸೇರೆಗಾರರನ್ನು ನಿಲ್ಲಿಸಿಕೊಂಡು, ಗುತ್ತೆ ಏಲಮನ್ನು ಅವನೇ ಪಡೆದನು. ತೆಂಕಿನವರು ನಮ್ಮೂರಿಗೆ ಬಂದು ಕಾಲಿರಿಸದ ಹಾಗಾಯಿತು.

ಮೀಸೆ ಸುಬ್ಬ ಯಾನೆ ಸುಬ್ಬ ಪೂಜಾರಿ ಐವತ್ತು ವರ್ಷ ಪ್ರಾಯದವನು. ಅರೆ ಬಿಳಿಯ ಮೈ, ಅಗಲ ಎದೆ, ದುಂಡು ಮುಖ, ದುಂಡು ದುಂಡು ರಟ್ಟೆ. ಅವನ ಮುಖದ ಮೇಲಿನ ಕಲ್ಲಿಮೀಸೆ, ತಲೆಯ ಹಾಳೆ, ಸೊಂಟದ ಹಿಂದುಗಡೆ ಮಾಮೂಲು ಮೂರ್ತೆ ಕತ್ತಿ, ನಡುವಿಗೆ ಮೊಳ ಅಗಲದ ಪಂಚೆ, ಒಕ್ಕಾಲು ಸರಿಗೆ, ಕಾಲಿಗೆ ಜೀಕಿನ ಜೋಡು-ಇಷ್ಟೆಲ್ಲ ಅವನ ಶೃಂಗಾರ. ಇದಕ್ಕೂ ಹೆಚ್ಚಾಗಿ ಎಂದರೆ, ಹೊತ್ತು ತಿರುಗಿದ ಬಳಿಕ, ಮಿಂದು ತುಳಸಿ ಕಟ್ಟೆಗೆ ಸುತ್ತು ಬರುವಾಗ ಮೈಗೆ ಎಳೆದುಕೊಳ್ಳುವ ಬಿಳಿ ನಾಮ. ಆಳು ಎಂದರೆ ಸುಬ್ಬ! ಆಳಿಗೆ ಸರಿಯಾದ ಭರ್ಜರಿ ಮೀಸೆಯಿದ್ದುದರಿಂದ 'ಮೀಸೆ ಸುಬ್ಬ' ಎನ್ನುವ ಹೆಸರೇ ಅವನಿಗೆ ಕಾಯಂ ಆಗಿದೆ. ಸುಬ್ಬ ಓ ಅಲ್ಲಿಂದ ಹೋಗುತ್ತಿದ್ದರೆ, ಅವನ ಮೆಟ್ಟಿನ ಜೀಕನ್ನು ಇಲ್ಲಿಂದಲೇ ಕೇಳಿಕೊಂಡು 'ಮೀಸೆ ಸವಾರಿ ಎಂದು ಕಾಣುತ್ತದೆ' ಎನ್ನಬಲ್ಲರು, ಅವನ ಗುರುತಿದ್ದವರು.

ಈ ತನಕ ಊರಿನ ಯಾವ 'ಗಂಡಾಗುಂಡಿ'ಯಲ್ಲೂ ಸುಬ್ಬ ಕಾಲಿರಿಸಿದವನಲ್ಲ. ಅವನ ಆಳುಗಳು 'ಅಂಥವರು ಇಂಥವರು' ಎಂದರೂ, ಸುಬ್ಬ ಮಾತ್ರ ಆ ಆರು ಗ್ರಾಮದ ಕಳ್ಳುಕುಡಿಕರೆಲ್ಲರಿಂದಲೂ 'ಭೇಷ್' ಅನಿಸಿಕೊಂಡವ. ಅವನ ಅಂಗಡಿಯಲ್ಲಿ ಮಾರುವ ಪಲ್ಯಕ್ಕೇನೆ ಮೆಚ್ಚಿ ಐದಾರು ಮೈಲು ದೂರ ನಡೆದು ಬರುವವರಿದ್ದಾರೆ. ಅಲ್ಲದೆ ಅವನದೇ ವ್ಯಾಪಾರ, ಬೆಲ್ಲದ ತಯಾರಿಕೆ ಇರುವಾಗ ಇತರ ಹಾಳುಹರಟೆಗಳಿಗೆ ಯಾಕೆ ಕೈಹಾಕಬೇಕು? ಹಾಳು ಹರಟೆ ಇಲ್ಲವೋ– ಎಂದರೆ ಉಂಟು; ಅದು ಕ್ರಿಮಿನಲ್; ಅಲ್ಲ—ಅಬಕಾರಿ ಲೆಕ್ಕದ್ದು.

ಸುಬ್ಬನ ಪೈಕಿ ಯಾರೋ ಅಲ್ಲೊಂದು ಬಟ್ಟಿ ಇರಿಸಿದ್ದಾರೆ, ಎಂದು ಸುದ್ದಿಯಾಗುತ್ತದೆ. ಹಾಹೂಂ ಅನ್ನುವುದರಲ್ಲಿ ಅದು ತನಿಖೆಯಾಗಿ ಜುಲುಮಾನೆಯೂ ಆಯಿತು—ಎಂಬ ವರ್ತಮಾನವೂ ಬರುತ್ತದೆ. ಅಬಕಾರಿ ಕೇಸುಗಳಲ್ಲಿ ಊರವರಿಗೆ ಯಾವ ಉಮೇದೂ ಇರುವುದಿಲ್ಲ. "ಕೇಸು ಮಾಡದೆ ಅವರಿಗೆ ಭಡತಿಯಾಗುವುದು ಹೇಗೆ? ಅವರೇನೆ ತರಿಸಿಡುತ್ತಾರೆ. ಅವರೇ ಜುಲುಮಾನೆ ಜಡಿಯುತ್ತಾರೆ" ಎಂದು ನಮ್ಮ ಊರವರ ಅಂಬೋಣ. ಇದು ನಮ್ಮೂರ ಶಾಲೆ ಮಕ್ಕಳಿಗೂ ತಿಳಿದ ವಿಚಾರ.

ಸುಬ್ಬ ತನ್ನ ಸೇಂದಿ ರಾಜ್ಯದಿಂದ — ಸಿವಿಲಿಗೆ ಕಾಲಿರಿಸಿದ್ದೆಂದರೆ ಇದೇ ಶೀನಪ್ಪ ಸೇರೆಗಾರ, ಕಾಳಿಂಗಯ್ಯನವರ ವಿವಾದದಲ್ಲಿ. ಅವನು ಕಾಲಿರಿಸುವ ಮೊದಲು, ನಾಗಯ್ಯ ಸೆಟ್ಟರ ಕೈಯ್ಯಾ ಇದರಲ್ಲಿ ಇದೆ ಎಂದರೆ — ಊರವರು ಅಷ್ಟು ಹೆದರುತ್ತಿದ್ದರು. ಆದರೆ ಈ ಜಗಳ ನಡೆದ ಮೇಲೆ "ಹೂಂ, ಗುಡ್ಡಕ್ಕೆ ಗುಡ್ಡ ಅಡ್ಡ ಉಂಟಲ್ಲ" ಎಂಬ ಸಮಾಧಾನ ಕೆಲವರಿಗೆ ಉಂಟಾಗಿದೆ. ಇನ್ನು ನಾಗಯ್ಯನನ್ನು ಕಂಡರೆ ಆಗದಿದ್ದವರು, "ನಾಗಯ್ಯ ಸೆಟ್ಟರಿಗೆ ಇನ್ನು ಮೀಸೆ ಇದ್ದರೂ ಒಂದೇ, ಇಲ್ಲದಿದ್ದರೂ ಒಂದೇ" ಎಂದು ತೀರ್ಮಾನ ಮಾಡುವಂತಾಯಿತು. "ಬಚ್ಚನಿಗೆ, ಸುಬ್ಬ ನಾಲ್ಕು ಚಡಾಯಿಸಿದ ಮೇಲೂ ಅವರು ತೆಪ್ಪಗಿದ್ದರೆ ಎಂದ ಮೇಲೆ ಅವರು ಸತ್ತರೂ ಸಮ" ಎಂದು ಆ ಸುದ್ದಿಯನ್ನು ಟೀಕೆಮಾಡುವವರೂ ಇದ್ದಾರೆ. ವಾಸ್ತವಕ್ಕೆ ಆ ದಿವಸ ಯಾರೂ ಯಾರನ್ನೂ ಹೊಡೆದಿರಲಿಲ್ಲ. ಆದರೆ ನಾಗಯ್ಯ ಸೆಟ್ಟರ ಅಹಂಕಾರ ಅರ್ಧಕ್ಕರ್ಧ ಕುಸಿದುದು ನಿಜ.

ನಾಗಯ್ಯ ಸೆಟ್ಟರು, ತಮ್ಮ ಜನರಿಗುಂಟಾದ ಪರಾಭವವನ್ನು ಕೇಳಿಕೊಂಡು, ಅದೇ ಗಳಿಗೆಗೆ ಸೀತ್ರೈತಾಳರಲ್ಲಿಗೆ ಓಡಿಹೋಗಿ "ಹೀಗಾಗುತ್ತಿತ್ತು ಎಂದು ತಿಳಿದಿದ್ದರೆ ನೂರು ಜನರನ್ನು ನಾನು ಕಳುಹಿಸುತ್ತಿದ್ದೆ. ಏತಕ್ಕೂ ಬೇಡದ ಹೆಗ್ಗಣವೊಂದು ಇವತ್ತು ನನ್ನೆದುರು ನಿಲ್ಲುವುದೆಂದರೇನು!" ಎಂದರಂತೆ.

ಸೀತ್ರೈತಾಳರು, "ಹೋಗಲಿ ಬಿಡು, ನಾಗಯ್ಯ. ಕಾಳಿಂಗ ಸಾಯಲಿ; ಶೀನಪ್ಪ ಹೊಂಡಕ್ಕೆ ಬೀಳಲಿ. ನಿನ್ನಿಂದಾದದ್ದು ಮಾಡಿಯಾಯಿತು, ಇನ್ನು ಬೇಡ. ಅಂದರೆ ಆ ಸುಬ್ಬ ಕಾಣಲಿಕ್ಕೆ ಮಿಣ್ಣಗಿದ್ದರೂ ಏನೂ ಮಾಡಿಯಾನು. ಅವನ ಬೇರೆಲ್ಲ ನನಗೆ ಗೊತ್ತಿದೆ. ಅವನೆಂದರೆ ಶುದ್ಧ ಕಲಿ ಜೀವ

ದಾಸೆಯಿಲ್ಲ ಅವನಿಗೆ. ಅಲ್ಲದೆ ಈಗ ಅಗ್ಗದ ಕಳ್ಳಿನ ಕಾಸಿನಿಂದ ಅವರೆಲ್ಲರೂ ಕೊಬ್ಬಿ ಹೋಗಿದ್ದಾರೆ. ಹೊಟ್ಟೆಯ ಮುಷ್ಟೆ, ಕೈಗೆ ಚಿನ್ನದ ಬಳೆ ಬಂದ ಮೇಲೆ ಯಾರ ಮುಲಾಜು ಅವನಿಗಿದ್ದೀತು? ಅಲ್ಲದೆ....ಬಿಲ್ಲವರ ಸೊಕ್ಕು ಅದು.... ಸುಮ್ಮನಿರು ನೀನು....ದೇವರೇ ಸಮ ಮಾಡುತ್ತಾನೆ. ನಮ್ಮ ವಿಷ್ಣು ಮೂರ್ತಿ ದೇವರ ದಯದಿಂದ ಸೇಲಮ್ಮಿನಲ್ಲಿ ಆದ ಹಾಗೆ ಇಲ್ಲಿಯೂ ಕಳ್ಳು, ಸೇಂದಿಗಳು ವಜಾ ಆದರೆ ಸುಬ್ಬನ ಮೀಸೆ ನೀರಿಲ್ಲದ 'ಅಗೇಡಿಯ' ಹಾಗೆ ಆಗುತ್ತದೆ, ಬಿಡು."

ನಾಗಯ್ಯ "ಐತಾಳರೇ, ಸೇಲಂ ಗೀಲಂನಲ್ಲಿ ಪ್ರಾಹಿಬೀಶನ್ ಬಂತೆಂದು ನಮ್ಮ ಊರಿಗೆ ಅದು ಬರುವಾಗ ಬೆಳಗಾದೀತು. ಅಷ್ಟರೊಳಗೆ ಈ ಸುಬ್ಬನ ಪೌಲನ್ನು ಅಡಗಿಸದಿದ್ದರೆ ನಾನೇಕೆ?" ಎಂದರು. ಸೀತೈತಾಳರು "ಬೇಡ, ನಾಗಯ್ಯ, ಅವನು ಸಾಯಲಿ. ಅವನಿಗೆ ಜೀವದಾಸೆಯಿಲ್ಲ. ನನಗೂ ಈಗ ಐವತ್ತು ವರ್ಷ; ಅವನಿಗೂ ಐವತ್ತು ಮೀರಿರಬೇಕು ಪ್ರಾಯ. ಅವನ ಸಣ್ಣತನದ ಕಥೆಯೊಂದು ಚೆನ್ನಾಗಿ ನೆನಪಿದೆ ನನಗೆ. ಅವನಿಗೆ ಸುಮಾರು ಇಪ್ಪತ್ತು ವರ್ಷಕ್ಕೆ ಮದುವೆಯಾಗಿತ್ತು. ಹೆಣ್ಣು ಅಂದರೆ ಅಂಥ ರತಿ ಇನ್ನಿಲ್ಲ. ಈ ಬಿಲ್ಲವರಲ್ಲಿ ಹೆಣ್ಣುಗಳೇ ಚಂದ. ನಿನಗೆ ನಮ್ಮ ತಿಮ್ಮಪ್ಪ ಹೊಳ್ಳರು ತಿಳಿಯದೇ? ಅವರ ತಂದೆ ಲಚ್ಚಣ್ಣ ಹೊಳ್ಳರು ಅಂತಿದ್ದರು—ಅವರು ಈ ಹುಡುಗ ಮೂರ್ತೆ ಕೆಲಸಕ್ಕೆ ಹೋದಾಗ ಅವನ ಗುಡಿಸಲ ಮುಂದೆ ಹೋಗಿ ತಾರೀಫು ಮಾಡಲು ತೊಡಗಿದರಂತೆ. ಎಷ್ಟು ದಿನ ಹಾಗೆ ನಡೆಯಿತೋ ತಿಳಿಯದು. ಒಂದು ದಿವಸ ಸುಬ್ಬ ಮನೆಗೆ ಬರುತ್ತಿದ್ದಾಗ, ಇವರು ಒಳಗಿಂದ ಅಂಗಳಕ್ಕಿಳಿಯುವುದನ್ನು ನೋಡಿದ. ನೋಡಿದ್ದೇ ತಡ, ಕತ್ತಿಯಿಂದ ಹಲಸಿನ ಹಣ್ಣು ಕಡಿದ ಹಾಗೆ ಕಡಿದೇ ಬಿಟ್ಟ. ಲಚ್ಚಣ್ಣ ಹೊಳ್ಳರು ಸತ್ತದ್ದು ಹಾಗೆ....ಅಲ್ಲೇ; ಅದೇ ಕ್ಷಣ. ಆ ಮೇಲೆ ಕೇಸಾಯಿತು; ಮಣ್ಣಾಯಿತು. ಆರು ತಿಂಗಳ ಕಾಲ ಸುಬ್ಬ ರಿಮಾಂಡಿನಲ್ಲೂ ಇದ್ದ. ಮತ್ತೆಲ್ಲವೂ ಫುಸ್ ಫುಸ್ ಆಯಿತು. ಸುಬ್ಬನ ತಪ್ಪಿಲ್ಲ—ಎಂದೇ ಆಯಿತು ಕೊನೆಗೆ. ಅದರ ಮೇಲೆ ಮಾತ್ರ ಸುಬ್ಬ ಯಾರೊಬ್ಬರ ತಂಟೆಗೂ ಹೋದವನಲ್ಲ; ಅವನು ತಿರುಗಿ ಕ್ರಿಮಿನಲ್ಲಿಗೆ ಇಳಿದ ಸಂಗತಿ ಇವತ್ತು ನಿನ್ನಿಂದ ಕೇಳುತ್ತಿದ್ದೇನೆ ಅಷ್ಟೆ. ಆಗಿನ ದಿನ ಅವನಲ್ಲಿ ಕಾಸೂ ಇರಲಿಲ್ಲ; ಜಾಮೀನಿನಿಂದ ಬಿಡಿಸುವವರಿದ್ದಿಲ್ಲ; ಆಗಲೇ ಅವನು ಹಾಗಿದ್ದರೆ, ಈಗ?"

ಐತಾಳರ ಈ ಪುರಾಣದಿಂದ ನಾಗಯ್ಯ ಸೆಟ್ಟರಿಗೆ ಸಮಾಧಾನವಾದೀತೇ? ಆಮುವರಿಂವಲೇ ನಾಗಯ್ಯ "ನನಗೆ ಕೆಲಸವಿದೆ, ನಾಳೆ ಬರುತ್ತೇನೆ" ಎಂದು ಥಟ್ಟನೆ ಮಾತನ್ನು ನಿಲ್ಲಿಸಿ ಹೊರಟುಹೋದರು. ಐತಾಳರು ಅವನನ್ನು ಮತ್ತೂ ಮತ್ತೂ ಕರೆದು ಕೂಗುತ್ತ "ನಾಗಯ್ಯ, ಹೋಗಲಿ, ಎಲ್ಲ ಮರೆತು ಬಿಡು. ತಿಳಿದೂ ತಿಳಿದೂ ಹುತ್ತಕ್ಕೆ ಕೈಹಾಕಬಾರದು. ಗುದ್ದಕ್ಕೆ ಬೆಂಕಿ ಬೀಳುವ ಕಾಲಕ್ಕೆ ಹಾವು ತನ್ನಂತೆ ಸಾಯುತ್ತದೆ" ಎಂದು ಸಮಾಧಾನ ಹೇಳಿದರು.



# ೫. ಮೊಗೇರ ಅಣ್ಣು

ಹಿಂದೆ ನಮ್ಮ ಊರಿಗೆ ಜವುಳಿ ವ್ಯಾಪಾರಕ್ಕೆಂದು ಆಗಾಗ ಬರುತ್ತಿದ್ದ ಸೇಲಂಕಾರರು ಹಳ್ಳಿಯ ಜನಗಳಿಗೆ ಪಾಲ್ಘಾಟು ಸೀರೆಯನ್ನು ಅಳೆದು ಮಾರುವಾಗ "ನೋಡು, ಇದು ಬರಾಬ್ಬರಿ ಗೆಟ್ಟಿ ರಂಗು" ಎನ್ನುವ ವಾಡಿಕೆಯಿತ್ತು. ಆದರಂತೆ, ಮೊಗೇರ ಅಣ್ಣು ಬಣ್ಣದಲ್ಲಿ 'ಗೆಟ್ಟಿ ರಂಗು'; ಕಡುಪಿನಲ್ಲಿ ಕಡುಪು, ಕಾಂಗು. ಆಳು ಎನ್ನಬೇಕು ಅಣ್ಣುವನ್ನು. ಆರು ಅಡಿಗಳಿಗೆ ಕಡಿಮೆಯಿಲ್ಲದ ನೀಳ ಶರೀರ; ಹದವಾದ ಎದೆ; ಮಾಂಸಖಂಡದಿಂದ ತುಂಬಿದ ತೋಳುಗಳು. ಅವನ ಶರೀರದ ಆಯ, ಅಳತೆಗಳೆಲ್ಲವೂ ಅಷ್ಟು ಸೊಗಸಾದ ಮೇಳವಾದುವು. ಸಾಮಾನ್ಯರ ಮುಂದೆ ಆತ ನಿಂತರೆ 'ಎದೆ ಬಿಚ್ಚಬೇಕು' ಎನ್ನುತ್ತಾರಲ್ಲ-ಹಾಗೆ. "ಕಳ್ಳು ಕುಡಿದರೆ ಆರೋಗ್ಯಕ್ಕೆ ಯಾಕಾದಿತು–ಎನ್ನುವವರಿದ್ದರೆ, ಅವರಿಗೆ ಪ್ರತ್ಯುತ್ತರವಾಗಿ ಅಣ್ಣುವನ್ನು ತೋರಿಸಬೇಕು. 'ಕುಡಿಯದೆ' ಅವನು 'ಬಡೆ'ಯಾದಾನೆಯೇ ವಿನಾ ಕುಡಿದು ಕೆಡುವಂತಹ ಜನವಲ್ಲ.

ಆಳು ಹೇಗೋ, ಆಳಿನ ನಾಲಿಗೆಯೂ ಹಾಗೆ. ಯಾರ ವಿಷಯದಲ್ಲೂ ಒಂದು 'ಬಿಸಾತು' ಎಂಬುದಿಲ್ಲ. ನಮ್ಮ ನಾಲ್ಕು ಗ್ರಾಮಗಳಲ್ಲಿ ಯಾರೊಬ್ಬರ ಹಂಗೂ ಅವನಿಗಿಲ್ಲ. ಇಲ್ಲ ಎಂದರೆ ಉಂಟು; ಉಂಟು ಎಂದರೆ ಇಲ್ಲ. ಎಲ್ಲವನ್ನೂ ಅವನು ಇರಿಸಿಕೊಂಡ ಹಾಗೆ; ಬಿಟ್ಟ ಹಾಗೆ. ಹೆಸರಿಗೆ ಅವನು ನಾಗಯ್ಯ ಸೆಟ್ಟರ ಒಕ್ಕಲು; ಆದರೆ 'ಕೆಲಸಕ್ಕೆ ಬಾ' ಎಂದು ಸೆಟ್ಟರೇ ಕರೆಯುವಂತಿಲ್ಲ. ಏನಾದರೂ ಅವನಿಂದ ಆಗಬೇಕಾದುದಿದ್ದರೆ, ಅವನಿಗೆ ಗಾಳಿಹಾಕಿ ಮಾಡಿಸಿಕೊಳ್ಳಬೇಕೇ ವಿನಾ ಗದರಿಸಿಯಲ್ಲ. ಇತ್ತ ಅವನ ಮರ್ಜಿಯೂ ವಿಚಿತ್ರದ್ದು. ಯಾವ ಗಳಿಗೆಯಲ್ಲಿ ಅದು ಹೇಗಿದ್ದೀತು-ಎಂದು ಅವನ ಅಪ್ಪನಿಂದಲೂ ಹೇಳಲೂ ಸಾಧ್ಯವಿಲ್ಲ. ಮೊನ್ನೆ ದಿವಸ ಕಾಳಿಂಗಯ್ಯನ ಆಸ್ತಿ ಸ್ವಾಧೀನತೆಯ ಗದ್ದಲದಲ್ಲಿ, ಬಚ್ಚನ ಜತೆಯಲ್ಲಿ ಅವರ ಮನೆಯ ಮುಂದೆ ಹೋಗಿ ನಿಂತವನು ಅವನೇ–ಸುಬ್ಬುಗೆ ಎದುರಾಗಿ. ಅದೇ ಸಂಜೆ ಸುಬ್ಬನ ಅಂಗಡಿಗೆ ಹೋಗಿ ನಿತ್ಯದ ದೋಸ್ತಿಯಂತೆ "ಪೂಜಾರ್ರೇ ಏನು, ಇವತ್ತಾದರೂ ಉಂಟಾ ಸಾಕಷ್ಟು" ಎಂದು ಕೇಳಿದವನೂ ಅವನೇ. ನಾಳೆ ಬೇಕಾದರೆ ಶೀನಪ್ಪ ಸೇರೆಗಾರರ ಗದ್ದೆ ಸಾಗುವಳಿಯನ್ನು ಮನಸ್ಸಾದರೆ ಹೋಗಿ ಅವನೇ ಉತ್ತು ಮಾಡಿಯಾನು.

ಊರಿನ ಮಾರಿಬಲೆಗೆ ಈ ಅಣ್ಣುವೇ ಯಜಮಾನ. ಅವನಿಲ್ಲದೆ ಅದು ನಡೆಯುವ ಹಾಗಿಲ್ಲ. "ಮೀನುಗಳ ಮಾತು ಸಹ ಅವನಿಗೆ ತಿಳಿಯುತ್ತದೆ" ಎಂದು ಚಿಕ್ಕಪುಟ್ಟ ಮೊಗೇರ ಮಕ್ಕಳು ಅನ್ನುವ ವಾಡಿಕೆಯುಂಟು. "ಮಾರಿಬಲೆಯಲ್ಲಿ ಇರುವ ಫಾಯದೆ ಇನ್ನಾವುದಕ್ಕಿದೆ" ಎಂದು ಶೀನಪ್ಪ ಸೇರೆಗಾರರೇ ಅಣ್ಣುವಿನ ಬಲೆಗೆ ಸಾಲಕೊಟ್ಟಿದ್ದಾರೆ. "ಹಾಗಿದ್ದ ನೀನು ನಾಗಯ್ಯ ಸೆಟ್ಟರ ಹಿಂದೆ ಹೋಗುವುದೇತಕ್ಕೆ ಅಣ್ಣು?" ಎಂದು ಸೇರೆಗಾರರು ಅವನನ್ನು ಕೇಳಿದರಂತೆ. ಅದಕ್ಕೆ ಅಣ್ಣುವಿನ ಪ್ರತ್ಯುತ್ತರ ತಯಾರು! "ನೀವು ಬಾ ಎಂದರೆ ಬರುತ್ತಿರಲಿಲ್ಲವೇ? ನೀವು ಕರೆಯಲಿಲ್ಲ, ಅವರು ಕರೆದರು" ಎಂದು.

ಹಾಗಾದರೆ ಈ ಜನವೇ 'ಪಕ್ಷಪ್ರೀತಿ' ಎಂದು ತಿಳಿಯುತ್ತೀರೋ? ಹಾಗೆಂದಿಗೂ ಇಲ್ಲ. ಅದಕ್ಕೆ ಮೀಸೆ ಸುಬ್ಬನೇ ಸಾಕ್ಷಿ. ಬೆಳಿಗ್ಗೆ ಮೀಸೆ ಸುಬ್ಬನ ಮುಂದೆ ಕೈಮಾಡಲು ನಿಂತು, ಸಂಜೆಗೆ ಆತನ ಅಂಗಡಿಗೇ ಹೋಗಬೇಕಾದರೆ ಸಾಮಾನ್ಯರಿಗೆ ಆ ಧೈರ್ಯ ಬರಲಾರದು. ಸುಬ್ಬನೇ ಅನ್ನುತ್ತಾನೆ- "ಅಣ್ಣುವಿಗೆ ಯಾವೊಬ್ಬರ ಪಾರ್ಟಿಯೂ ಇಲ್ಲ. ಅವನ ಪಾರ್ಟಿ ಸೀಸೆಯದು. ನೀವು ಬೇಕಷ್ಟು ಕುಡಿಸಿ; ಆಗ ನಿಮ್ಮವ ಅವನು; ಅವರು ಕುಡಿಸಿದರೆ ಅವರ ಪಾರ್ಟಿ; ನೀವು ಹೊಗಳಿದರೆ ನಿಮ್ಮ ಪಾರ್ಟಿ; ನೀವು ತೆಗಳಿದರೆ ಅವರ ಪಾರ್ಟಿ."

ಇನ್ನು ಕೆಲಸದ ವಿಚಾರ ಕೇಳಲೇ ಬೇಡಿ; ಮಾರಿಬಲೆಗೆ ಹೋದ ಎಂದರೆ ಅವನಿಗೆ ಅನ್ನ, ನೀರು ಬೇಡ. ಅವನ ಕೈ ಲಕ್ಷಣ ಒಳ್ಳೆಯದು ಎನ್ನುತ್ತಾರೆ. ಬಲೆಬೀಸಿ ಬರಿಗೈ ಅವನು ಮನೆಗೆ ಬಂದುದೆಂಬುದೇ ಇಲ್ಲ. ಮಾರಿಬಲೆ ಬೀಸಿ ಬರಿದೆ ಬಂದರೆ, ಆ ದಿನ ಅವನು ಯಾರ ಹತ್ತಿರವೂ ಮಾತನ್ನು ಆಡಲಿಕ್ಕಿಲ್ಲ; ಆ ದಿನ ಊಟವೇ ದಕ್ಕಲಿಕ್ಕಿಲ್ಲ ಅವನಿಗೆ. ಆ ಸಂಜೆ ಮನೆಗೂ ಸಹ ಹೋಗುವಂತಿಲ್ಲ. ಮರುದಿನ....ಅದರ ಮರುದಿನ ಬಲೆ ಬೀಸಿ, ಒಂದು ಕೈ ಕಾಣಬೇಕು:"ಅದೇನು ಬರ್ಮ ಬರೆದದ್ದೆಂದು ಕಂಡೇ ಬಿಡುವ" ಎಂಬ ಮರ್ಜಿ ಅವನದ್ದು. ಬಲೆ ತುಂಬಿ ಬಂದಿತು; ಕೂಡಲೇ ಶೇಕು ಬ್ಯಾರಿಗಳ ಕೊರಳಿಗೆ ಆ ಮೀನನ್ನು ಕಟ್ಟಿಯಾಯಿತು. ಮೀನು ಸಾಟಿಯಾದ ಅರೆಗಳಿಗೆಯಲ್ಲಿ ಅವನಿದ್ದಾನೆ ಮೀಸೆ ಸುಬ್ಬನ ಗಡಂಗಿನಲ್ಲಿ, ಅವನ ಜತೆಯಲ್ಲಿ ಸಾಮಾನ್ಯ ಕುಡಿಕರು ಬಂದರೆ "ಹತ್ತು ಸೀಸೆ ಕಡಿಮೆ ಕುಡಿಯದವರು ಯಾವ ಮಣ್ಣಿಗೆ ಬರುವುದು ಗುತ್ತಿಗೆಗೆ? ಪೂಜಾರಿಗೆ ಬೇರೆ ಕೆಲಸವಿಲ್ಲವೆಂದು ದಣಿಸಲಿಕ್ಕೇನು?" ಎಂದು ಬಿಡುತ್ತಾನೆ. ಅವನ ಕೈಯ್ಯಲ್ಲಿ ಕಾಸಿದ್ದ ದಿವಸ ತನ್ನ

ಸುತ್ತಲಿನ ನಾಲ್ಕಾರು ಜನರಿಗೆ ತನ್ನಂತೆಯೇ ಹೆಂಡವನ್ನು ಕುಡಿಸಿ ಮನೆಗೆ ಕಳುಹಿಸಿಯಾನು. ಆ ಬಳಿಕ ಅವರನ್ನು ಕಂಡು ನಗುತ್ತ "ತಲೆಯೆತ್ತಿಕೊಂಡು ಹೋಗಬೇಕು; ಅದು ಗಂಡಸುತನ. ಹಾದಿಯ ಮೇಲೆ ಹಂಯ್ಸಾರ (ಕೇರೆ) ದಂತೆ ಹೋಗುವವರು ಸೀಸೆ ಮುಟ್ಟಕೂಡದು" ಎಂದು ಹೇಳುವುದೂ ಉಂಟು.

ಅಣ್ಣುವಿನ ಸವಾರಿ ಗಡಂಗಿಗೆ, ಸಂಜೆ ಆರು ಘಂಟೆ ಸಮಯಕ್ಕೆ ಒಳ ಹೊಕ್ಕರೆ, ಹೊರಬೀಳುವಾಗ ಹೊತ್ತು ಮುಳುಗಿ ಜಾವವಾದರೂ ಸಲಬೇಕು. ಅಲ್ಲಿ ಯಾರೂ ಅವನ ಹರಟೆಗೆ ಸಿಗದಿದ್ದರೆ ಸುಬ್ಬ ಪೂಜಾರಿಯನ್ನಾದರೂ ಕುಳ್ಳಿರಿಸಿಕೊಂಡು ಮಾತನಾಡುತ್ತಿರಬೇಕು. ಸಂಜೆ ಹೊತ್ತು ಮುಳುಗಿ ಎರಡು ಗಳಿಗೆಯೊಳಗೆ ಅಣ್ಣು ಮನೆಗೆ ಬರಲಿಲ್ಲ ಎಂದು ತಿಳಿದರೆ, ಆವೊತ್ತು ಗಡಂಗಿಗೆ ಸವಾರಿ ಹೋಗಿದೆಯೆಂದು ಅವನ ಹೆಂಡತಿಗೆ ನಿಶ್ಚಯ. ಬಹಳ ಹೊತ್ತಾ ದರೆ ಅವಳೇ ಗಡಂಗಿಗೆ ಬಂದು, ಅವನನ್ನು ಹುಡುಕಿ ಕರೆದುಕೊಂಡು, ಕೈ ಕೊಟ್ಟು ಮನೆಗೆ ಸಾಗಿಸುತ್ತಾಳೆ. ಹಾಗೆಂದು ಅಣ್ಣುವಿಗೆ ಕುಡಿದು ಕುಡಿದು ಮೈಯ್ಯ ಎಚ್ಚರವಿರುವುದಿಲ್ಲ ಎಂದು ತಿಳಿಯಬೇಡಿ.

ಆಗ ಅವನದು ಬರಿಯ ಉತ್ಸಾಹ. ಅವನಲ್ಲಿ ಸುಳ್ಳಿನ ಚೂರೂ ಬರ ಲಾರದು: ಆದರೆ ಜರ್ಬು ತುಸು ಜಾಸ್ತಿ. ಅಣ್ಣು ಕುಡಿದು ಪೌರುಷಮೂರ್ತಿ ಯಾಗಿರುವಾಗ ಊರವರನ್ನು ಕುರಿತಾದ ಟೀಕೆ ಕೇಳಬೇಕು—ಉಳಿದ ಸಮಯ ದಲ್ಲಿ ಅವನು ನಿಮಗೆ ಭೇಟಿಯಾದರೆ ಬೇರೆಯವರ ಸುದ್ದಿಯನ್ನೇ ನಿಮ್ಮೊ ಡನೆ ಟೀಕಿಸಿಯಾನು. ಕುಡಿದಾಗ ಬರಿಯ ನಿಮ್ಮ ಸುದ್ದಿಯನ್ನೇ ನಿಮ್ಮೊಡನೆ ಟೀಕಿಸುತ್ತಿರಲೂಬಹುದು—ಇಷ್ಟೇ ವ್ಯತ್ಯಾಸ.

ಒಂದು ದಿನ ನಮ್ಮ ಸೀತ್ಮೈತಾಳರು ಸಂಜೆಯ ಸಮಯ ಅವನಿಗೆ ಭೇಟಿ ಯಾದರು. ಅವರಿಗೆ ಅವನಿಂದಾಗಬೇಕಾದ ಒಂದು ಕೆಲಸವಿತ್ತು. ಆದುದ ರಿಂದ ಅಣ್ಣುವನ್ನು ಕರೆದು, ನಿಲ್ಲಿಸಿಕೊಂಡು "ಅಣ್ಣು, ನಾಳೆ ಮನೆಗೆ ಬಂದು ಬಿಡು: ಒಂದು ಚಪ್ಪರವಾಗಬೇಕು, ಮಧ್ಯಾಹ್ನ ಗಡದ್ದು ಪಾಯಸ ಮಾಡಿ ಸುವ" ಎಂದರು. ಸರಿ, ಅಣ್ಣು ಬಲು ಸ್ಫೂರ್ತಿಯಲ್ಲಿದ್ದ ಸಮಯವದು. ಬಾಯಿಂದ ಮುಕ್ತಧಾರೆಯೇ ಹೊರಟಿತು!

"ಗಡದ್ದು ಪಾಯಸವೇ! ನನಗೆ ಗೊತ್ತಿಲ್ಲವೇ ಬ್ರಾಂಬ್ರ ಗಡದ್ದು! ಮನೆಯವರಿಗೆ ಬೇಳೆ ಹಾಕಿ ಹುಳಿಮಾಡಿದರೆ, ಸೂದ್ರ ಮಕ್ಕಳಿಗೆ ಅಕ್ಕಿ ಹಿಟ್ಟಿನ

ಹುಳಿ. ಅಲ್ಲ; ಬ್ಯಾಳೆ ಯಾವುದು, ಅಕ್ಕಿ ಹಿಟ್ಟು ಯಾವುದು ಎಂದು ನಮ್ಮ ನಾಲಿಗೆಗೆ ತಿಳಿಯುದೇ? ಗಡದ್ದು ಪಾಯಸವಂತೆ. ಅಕ್ಕಿ ಪಾಯಸವಲ್ಲವೇ? ಬ್ರಾಂಬ್ರು ತಿನ್ನುವ ಗೋಧಿ ಪಾಯಸವನ್ನು ತಿಂದರೆ ಸೂದ್ರ ಮಕ್ಕಳ ಹೊಟ್ಟೆ ನೋಯಲಿಕ್ಕಿಲ್ಲ.

"ನಾಲ್ಕು ಸೌತೆ ಮಿಡಿ ಕಾಣಲಿಕ್ಕಿಲ್ಲ, ಐತಾಳರ ಹೆಂಡತಿ ತಯಾರು. 'ನಿಮಗೆ ಮೊನಲ್ಲದೆ ಸೌತೆ ಮಿಡಿ ಯಾವ ಮಣ್ಣಿಗೆ' ಎಂದು ನಮ್ಮ ಹೆಣ್ಮಕ್ಕಳಿಗೆ ಹುಸಾರು ಮಾಡಿ, ಸೌತೆಮಿಡಿ ಮನೆಗೆ ಹೊತ್ತಾಯಿತು. ಏನು! ಸೌತೆ ಮಿಡಿ ಮೊಗೇರು ತಿಂದರೆ ಸತ್ತು ಹೋದಾರೇ? ನಮಗೆ ತಿನ್ನಲಿಕ್ಕೆ ಬಾರದಿದ್ದರೆ ಸಂತೆಯಲ್ಲಿ ನಾಲ್ಕು ಪಾವಾಣೆಗೆ ಮಾರಬಾರದೇ? ಎರಡು ಪಾವಾಣೆ ಸಿಕ್ಕದರೆ ಉಪ್ಪಿಗೋ, ಮೆಣಸಿಗೋ, ಗೆಣಸಿನ ಗೆಡ್ಡೆಗೋ ಆಗುವುದಿಲ್ಲವೇ? ಎಲ್ಲಾ ಬ್ರಾಂಬ್ರ ಆಸೆ; ಈ ಬ್ರಾಂಬ್ರದ್ದು ಮತ್ತೆಲ್ಲಾ ಸಮ—ಆಸೆ ಒಂದು ಬಿಟ್ಟರೆ! ಒಂದು ಪಾವಾಣೆ ದಕ್ಷಿಣೆ ಸಿಗುತ್ತದೆ ಅಂತಾದರೆ ಸಾಸ್ತಾನದ ಪೇಟೆಯಿಂದ ಉಪ್ಪುಂದದ ಅಂಬಲಕ್ಕೆ (೨೪ ಮೈಲು) ಹೊರಟಾಯ್ತು."

ಈ ಉಪನ್ಯಾಸವನ್ನು ಕೇಳಿಯೇ ಐತಾಳರ ಅರ್ಧ ದಮ್ಮು ಇಳಿಯಿತು. ಅವರು ಮೆಲ್ಲಗೆ ತಮ್ಮಷ್ಟಕ್ಕೆ "ಹೂಂ, ಸಾಯಂಕಾಲ ನಿನ್ನನ್ನು ಮಾತನಾಡಿಸಿದ್ದೇ ತಪ್ಪು" ಎಂದರು.

"ಸಾಯಂಕಾಲವಾದರೆ ಏನಂತೆ? ಎಂಟು, ಹತ್ತು ಸೀಸೆ ಕುಡಿದರೆ ತಲೆ ಏರುತ್ತದೆಯೇ? ಅದೆಲ್ಲ ಆಸೆಯೂ ಬ್ರಾಂಬ್ರಿಗೆ; ಮೊಗೇರ ಮಕ್ಕಳು ಹೊಟ್ಟೆಗೆ ಆಸೆಮಾಡುವವಲ್ಲ."

ಸ್ವಲ್ಪ ತಡೆದು, ಐತಾಳರ ಸಪ್ಪಗಾದ ಮುಖವನ್ನು ನೋಡಿ:

"ಅಯ್ಯನಿಗೆ ಬೇಸರವಾಯಿತೆಂದು ಕಾಣುತ್ತದೆ; ಹೋಗಿ ನೀವು; ನಾಳೆ ಬೆಳಿಗ್ಗೆ ಮನೆಗೆ ಬಂದರಾಯಿತಲ್ಲ. ಮನೆಯಲ್ಲಿ ಮಡಲು ಹೊರೆ ಉಂಟೋ? ಅದನ್ನೂ ತರಬೇಕೊ?"

"ಇದೆ, ಆದರೆ ಒಂದು ಹೊರೆ ಮಟ್ಟಿಗೆ ಕಡಿಮೆ ಬೀಳಲಿಕ್ಕೂ ಸಾಕು."

"ಆಯಿತು, ತರುತ್ತೇನೆ. ನಮ್ಮ ಐತಾಳರಲ್ಲವೆ? ಹೋಗಿ ನೀವು; ಆದರೆ ಅಕ್ಕಿ ಪಾಯಸದ ಬದಲು ಕಡಲೆಪಾಯಸ ಮಾಡಿಸಿದ್ದರೆ ಲಾಯಕಾಗುತ್ತಿತ್ತು."

"ಆಗಲಿ, ಗೋಧಿ ಪಾಯಸವನ್ನೇ ಮಾಡಿಸುವ. ನಿನ್ನ ಹತ್ತಿರ ಕೆಟ್ಟ ಹೆಸರು ಕೇಳಲಿಕ್ಕೆ ಬಂದೀತೇ? ನಿನ್ನ ರುಕ್ಕು, ಮಕ್ಕಳು, ಎಲ್ಲರೂ ಬರಲಿ."

"ಹಾಂ, ಕುಟುಂಬಕ್ಕೇ ಹೇಳಿಕೆಯೋ! ಬಡವರ ಮಕ್ಕಳ ಹಣೆಯಲ್ಲಿ ದೇವರೇ ಬರೆದದ್ದು. ಯಾವಾಗಲೂ ಮೀನು ತಿಂದು, ತಿಂದು ನನ್ನ ಮೈ ಬೆಚ್ಚಿ ಹೋಗಿದೆ. ನನಗೆ ಪಾಯಸ ಅಂದರೆ ಭಾರೀ ಖುಶಿ" ಎಂದು ನಕ್ಕು ನುಡಿದು ತೆರಳಿದನು.

ಇನ್ನೊಂದು ದಿವಸ 'ಗ್ರಹಚಾರಕ್ಕೆ ಸರಿಯಾಗಿ' ಎಂಬಂತೆ ಅಕ್ಕಸಾಲಿ ತಿಮ್ಮಪ್ಪನಿಗೆ ಅಣ್ಣು ಹಾದಿಯಲ್ಲಿಯೇ ಎದುರಾದ. ಯಾವುದೋ ಯುಗದಲ್ಲಿ ಅವನ ಹೆಂಡತಿ ರುಕ್ಕು, ಒಂದು ಕಾಲಿನ ಸರಪಳಿಯ ಬೆಳ್ಳಿಯ ಕೀಲನ್ನು ಸರಿ ಪಡಿಸಲು ತಿಮ್ಮಪ್ಪನಿಗೆ ಕೊಟ್ಟಿದ್ದಳಂತೆ. ಅದನ್ನು ಕೇಳಿ, ಕೇಳಿ ಬೇಸರ ಬಂದು, ಅವಳಿಗೆ ಮರವೆಯಾಗಿಯೂ ಹೋಗಿತ್ತು. 'ಅದನ್ನು ಸರಿಮಾಡಿ ಕೊಡುವ' ಎಂದು ಇಸಕೊಂಡ ತಿಮ್ಮಪ್ಪ ಅಕ್ಕಸಾಲಿಗೆ ಅದಕ್ಕಿಂತ ಮೊದಲೇ ನೆನಪಿಲ್ಲ. ಆದರೆ ಇದು ಸಂಜೆಯ ಸಮಯವಷ್ಟೆ. ಆಗ ಎಲ್ಲೆಲ್ಲಿ ಅಡಗಿದ ನೆನಪುಗಳೆಲ್ಲ ಅಣ್ಣುವಿನ ತಲೆಯಲ್ಲಿ ಮೇಲಕ್ಕೆ ತೇಲಿಬರುವ ಸಮಯ. ಅದೇ ಸಮಯಕ್ಕೆ ಸರಿಯಾಗಿ ಅಕ್ಕಸಾಲಿಯೂ ಕಣ್ಣಿಗೆ ಬಿದ್ದಂತಾಯಿತು.

ತಿಮ್ಮಪ್ಪ ಅಣ್ಣುವನ್ನು ತಾನಾಗಿಯೇ ಮಾತನಾಡಿಸಲು ಅಂಜಿದರೂ, ಮಾತನಾಡದೆ ಹೋದರೆ, ಅಣ್ಣು 'ಈ ಅಕ್ಕಸಾಲಿ ಡೌಲೇ' ಎಂದಾನೆಂದು ಹೆದರಿ "ಎಲ್ಲಿಗೆ ಅಣ್ಣು? ಇವತ್ತು ತೆಕ್ಕಟ್ಟೆ ಮೇಳದ ಆಟ ಐಗಳ ಬೆಟ್ಟಿನಲ್ಲಿ. ಹೋಗುವುದುಂಟೇ?" ಎಂದು ಕೇಳಿದನು.

"ಆಟವೇ? ಆಟಗೀಟ ಅಕ್ಕಸಾಲಿಗರ ಮಕ್ಕಳಿಗೆ. ಮೊಗೇರರ ಮಕ್ಕಳಿಗೆ ಮಾರಿಬಲೆ.

"ಅಲ್ಲ! ನನ್ನ ರುಕ್ಕು ಅಕ್ಕಸಾಲೇರ ಕೈಮೇಲೆ ಹಾಕಿದ ಕಾಲುಕೀಲಿ ಸಮಮಾಡಿ, ಸಿಕ್ಕುವುದು ಮುಂದಿನ ಜನ್ಮಕ್ಕೇ ಸರಿಯೆಂತ ಕಾಣುತ್ತದೆ. ಅಲ್ಲ, ಈ ಅಕ್ಕಸಾಲಿಯರ ಕುಲವೇ ಹಾಗೇನು! ನಾವು ಕಳ್ಳು ಕುಡಿಯುವ ಮೊಗೇರ ಗಂಡುಗಳಿಗಾದರೂ ಆಡಿದ ಮಾತು, ಆಣೆ, ಬಾಸೆಯೆಲ್ಲ ಉಂಟು. ನಿಮಗೆ ಅದೊಂದೂ ಬೇಡವೇ?" ಎಂದ.

ತಿಮ್ಮಪ್ಪನಿಗೆ ಬೇಸರ ಬಂದು "ಯಾಕೆ ಗ್ರಹಚಾರ ಸುತ್ತಿ ನಿನ್ನನ್ನು ಮಾತನಾಡಿಸಿದೆನಪ್ಪ" ಎಂದು ಹೇಳುವಂತಾಯಿತು.

ಅಣ್ಣುವಿಗೆ ನಗು ಬಂದಿತು. "ನಾನು ಹೇಳಿದ್ದು ಹೆಚ್ಚಾಯಿತು ಎಂದು ಕಾಣುತ್ತದೆ; ಬೇಡ ಹೋಗಲಿ. ಆರು ಕಾಸಿನ ಒಂದು ಕೀಲಿಗೆ ಅಕ್ಕಸಾಲೇರ

ಮನಸ್ಸು ನೋಯಿಸುವುದು ಬೇಡ. ಕಾಲು ಹಿಡಿದೆ...ತಪ್ಪಾಯಿತು.

"ಆದಿರಲಿ, ಎಂಥಾ ಪ್ರಸಂಗವಂತೆ?"

ಇನ್ನು ಬಯಲಾಟದ ಸುದ್ದಿ ಬಂದಿತೆಂದು ತುಸು ಧೈರ್ಯಗೊಂಡ ತಿಮ್ಮಪ್ಪನು ಸಂಭಾಷಣೆಯನ್ನು ತಪ್ಪಿಸಿ ಅಲ್ಲಿಂದ ಹೊರಡಲು ಧೈರ್ಯವಿಲ್ಲದೆ "ಕನಕಾಂಗಿ ಕಲ್ಯಾಣ. ಮೀನಾಕ್ಷಿ ಕಲ್ಯಾಣವಾಗಿದ್ದರೆ ಲಾಯಕಿತ್ತು" ಎಂದ.

ಸರಿ, ರಸಿಕನಾದ ಅಣ್ಣುವಿನ ಬತ್ತಳಿಕೆಯಿಂದ ವಿಮರ್ಶೆಯ ಬಾಣಗಳು ಹೊರಡತೊಡಗಿದುವು. "ಅಕ್ಕಸಾಲ್ರೇ, ನಿಮಗೆ ಹೆಂಡತಿ ಮನೆಯಲ್ಲಿ ಇರಕೂಡದು ಅನ್ನುತ್ತಾಳೆಯೇ? ತೆಕ್ಕಟ್ಟೆ ಮೇಳ ನೋಡುವುದು ಹರಕಗೆ. ಆಟ ನೋಡಬೇಕು ಮಂದರ್ತಿಯದು. ಪ್ರಸಂಗ ಅಂದರೆ ಪಂಚವಟಿ. ಬಣ್ಣದ ವೇಷ ನೋಡಬೇಕು ಉಪ್ಪಳ್ಳಿ ಶೇಷನದ್ದು. ಕುಣಿತ ಗಿಣಿತ ಪಾಂಡೇಶ್ವರದ ಪುಟ್ಟಯ್ಯನವರದ್ದು. ಇವನ್ನೆಲ್ಲ ಏನು ನೋಡುವುದು?"

"ಆದೆಲ್ಲ ಹಿಂದಿನ ಕಥೆ, ಉಪ್ಪಳ್ಳಿ ಶೇಷ ಸತ್ತಮೇಲೆ ಈ ನಮ್ಮ ಕುಷ್ಟ ಇಲ್ಲವೆ! ಅದರೆ ನೋಡಿ—ಪುಟ್ಟಯ್ಯ ಸತ್ತದ್ದೇ ಸತ್ತದ್ದು; ಕುಣಿತ ಅವನ ಹಿಂದೆಯೇ. ಇದೆಲ್ಲ ಒಂದು ಕುಣಿತವೋ? ಬರಿದೆ ಕುಣಿದರೆ ಸರಿಯೇ? ಅದಕ್ಕೊಂದು ಗತ್ತು ಬೇಡವೇ? ಇವೆಲ್ಲ ಸುಮ್ಮನೆ ದಿಗಣಹಾಕುವುದು."

"ಹಾಂಗೆನ್ನುತ್ತೀರಾ? ನನಗೆ ಈ ತೆಕ್ಕಟ್ಟೆ, ಸೂರಾಲು, ಮಂದರ್ತಿ, ಮಾರ್ಣಕಟ್ಟೆ ಒಂದೇ ಒಂದು ಮೇಳವೂ ಹಿಡಿಸುವ ಹಾಗಿಲ್ಲ. ನನಗೆ ಒಂದು ಮನಸ್ಸು—ಬಿಲ್ಲವರೆಲ್ಲ ಈ ವರ್ಷ ಒಂದು ಮೇಳ ಎಬ್ಬಿಸಿದ್ದಾರಂತೆ. ಯಾಕೆ ನಮ್ಮ ಮಾರಿಬಲೆಯವರಿಗೆ ಒಂದು ಮೇಳ ಎಬ್ಬಿಸಲಿಕ್ಕೆ ಬರಲಿಕ್ಕಿಲ್ಲ? ಒಂದು ೫೦೦ ರೂಪಾಯಿಯ ದಂಡಬಿದ್ದೀತು. ಕಡಲು ದೇವರು ಮನಸ್ಸು ಮಾಡಿದರೆ ನಾಲ್ಕು ಮೇಳ ಹೊರಡಿಸಬಹುದಷ್ಟೆ; ಒಂದಲ್ಲ. ಆದರೆ ಒಂದು ಸಂಗತಿ, ಅಕ್ಕಸಾಲರೇ, ಎಲ್ಲರೂ ಕಳ್ಳು ಕುಡಿಯುವ ಗಂಡುಗಳು. ಕುಡಿತದ ಲೆಕ್ಕ ತಪ್ಪಿದರೆ ಇವು ಎಲ್ಲೋ, ರಂಗಸ್ಥಳ ಎಲ್ಲೋ! ಹಾಗಾದ್ರೆ ಮಾತ್ರ ಮೋಸ!"

ಅಕ್ಕಸಾಲಿಗೆ ನಗು ಬಂದಿತು. ಈ ಅಣ್ಣುವಿನ ಟೀಕೆಗೆ ಪಕ್ಷವೂ ಇಲ್ಲ; ನಂಜೂ ಇಲ್ಲ. ಈ ಮೊದಲು ಅವನು ತನ್ನನ್ನು ಚಿವುಟಿದ ನೋವು ಮರವೆಯಾಗಿ ತಿಮ್ಮಪ್ಪ "ಅಣ್ಣು, ನಾನು ಅದನ್ನಲ್ಲ ಹೇಳುವುದು; ಆಡುವವರ ಮಕ್ಕಳು ಆಡಬೇಕು; ಬೇಡುವವರ ಮಕ್ಕಳು ಬೇಡಬೇಕು. ನಾನು ಬಲಿ

ಜೀಸಿದರೂ ಆಗಲಿಕ್ಕಿಲ್ಲ; ಏನು ಅದ್ದಣಿ ಮುಂದೆ ಕುಳಿತರೂ ಆಗಲಿಕ್ಕಿಲ್ಲ. ಆಟದ ಕಸಬು ಬಿಲ್ಲವರಿಗೂ ಅಲ್ಲ; ಮೊಗೇರರಿಗೂ ಅಲ್ಲ.

"ಆದರೆ ಒಂದು, ನಿಮ್ಮವರು ಮನಸ್ಸು ಗಟ್ಟಿಮಾಡಿದರೆ ನಾಲ್ಕು ಮೇಳ ಸಾಕುವ ತ್ರಾಣವಿದ್ದವು. ಈ ವರ್ಷ ಮಾರ್ಣಕಟ್ಟೆಯವರು— ಊರಲ್ಲಿ ದಿನಕಳೆಯುವುದಿಲ್ಲ ಎಂದು ಬಡಗಲಾಗಿ ಹೋಗುತ್ತಾರಂತೆ; ಇನ್ನೊಂದು ಮೇಳ ತೆಂಕಲಾಗಿ ಹೋಗುತ್ತದಂತೆ. ಏನು! ನಮ್ಮ ಊರವರಿಗೆ ಧಾಡಿಯೇ? ಎರಡು ಮೂರು ಮೇಳಗಳನ್ನು ಸಾಕುವ ತ್ರಾಣವಿಲ್ಲವೇ? ಅದಕ್ಕೆ ಬಡಗಲಾಗಿನವರು, ತೆಂಕಲಾಗಿನವರು ಬೇಕೆ?"

"ಘಟ್ಟಕ್ಕೆ ಹೋಗುತ್ತಾರಂತೇನು? ಅದೇನು ನಮ್ಮ ಮಂದಿಗೆ ನಾಲ್ಕು ಆಟ ಆಡಿಸಿದರೆ ಧಾಡಿಯೇ? ಒಂದು ರಾಶಿ ಬ್ರಾಂಬ್ರು, ಒಂದು ರಾಶಿ ಬಂಟ್ರು, ಇನ್ನು ಪೇಟೆಯವರು ಒಂದು ರಾಶಿ ಇದ್ದಾರಲ್ಲ....ಹಾ...ಹಾ ಕಾಸು ಬಿಡಿಸುವ ಕುಲ ಒಂದೂ ಅಲ್ಲ ಎಂದು ಕಾಣುತ್ತದೆ."

"ಕಾಸು ಬಿಡಿಸಲಿಕ್ಕೆ ಬ್ರಾಂಬ್ರೂ ಇಲ್ಲ; ಬಂಟರೂ ಇಲ್ಲ. ಪೇಟೆಯ ವರು ಇರುವುದು ಕಾಸು ಸುಲಿಯಲಿಕ್ಕೆ; ಅವರು ಖರ್ಚು ಮಾಡಲಿಕ್ಕಿಲ್ಲ. ಅದಕ್ಕೆಲ್ಲ ನೋಡು, ಮೊಗೇರರೇ ಬೇಕು."

"ಹೋಗಲಿ, ಈ ವರ್ಷ ನಮ್ಮ ಬಲೆಯವರಿಂದ ನಾಲ್ಕು ಆಟ ಆಡಿಸುವ. ಊರವರು ಬಂದು ನೋಡಲಿ ಮೊಗೇರ ಮಕ್ಕಳ ಲೆಕ್ಕಕ್ಕೆ ನಾಲ್ಕು ಆಟಗಳನ್ನು" ಎಂದು ಅಣ್ಣು ಬಲು ಉದಾರವಾರ ಭರವಸೆಯನ್ನು ಕೊಟ್ಟು ಹೊರಟನು.

ಅದೇ ದಿವಸ ರಾತ್ರಿ ತೆಕ್ಕಟ್ಟೆ ಮೇಳಕ್ಕೆ ಅಣ್ಣು ಹೋಗಿದ್ದ; ತಮ್ಮಲ್ಲಿಗೆ ಬಂದು ಆಟವಾಡಬೇಕೆಂಬ ಆಮಂತ್ರಣವನ್ನೂ ಕೊಟ್ಟಿದ್ದ.



## ೬ ಅಕ್ಕಸಾಲಿ ತಿಮ್ಮಪ್ಪ

ನಮ್ಮ ಊರಿನಲ್ಲಿ ಯಾರಾದರೂ ರಸಿಕರಿದ್ದಾರೆಯೋ ಎಂದು ಕೇಳಿದರೆ, ಅಕ್ಕಸಾಲಿ ತಿಮ್ಮಪ್ಪನನ್ನು ತೋರಿಸಬೇಕು. ಅವನಿಗೆ ಈಗ ನಲವತ್ತರ ಮೇಲೆ ಎರಡು ವರ್ಷ ಪ್ರಾಯ. ಅಷ್ಟೇನು ಭರತಿ ಆಳಲ್ಲ. ಐದೂವರೆ ಅಡಿ ಗಾತ್ರದ ತೆಳ್ಳಗಿನ ಶರೀರ. ಕಪ್ಪಲ್ಲವಾದರೂ ಕಡುಪು ಮೈ ಬಣ್ಣ. ನಮ್ಮೂರ ವಾಡಿಕೆಯಂತೆ ತುಂಬ ತಲೆಕೂದಲು ಬಿಟ್ಟಿದ್ದಾನೆ. ಕಿವಿಗೆ ಪುಷ್ಯರಾಗದ ಎರಡು 'ಭರ್ಜರಿ' ಒಂಟಿಗಳಿವೆ. ಹಿಂಬದಿಯಿಂದ, ಆ ಒಂಟಿ ಹರಳಿಗಿಂತ ತಾವೊಂದು ಕಡಿಮೆಯಲ್ಲ ಎಂದು ಸಾರುವ ಒಂಟಿ ಕೀಲುಗಳು. ಕೂದಲಿಲ್ಲದ ಹೊಳಪು ಎದೆಯ ಮೇಲೆ, ಒಂದು ಶಾಲು ಎಳೆದುಕೊಂಡರೂ ಎಳೆದು ಕೊಂಡ; ಇಲ್ಲವಾದರೆ ಇಲ್ಲ. ಆದರೆ ಉಡಲಿಕ್ಕೆ ಬಾವಲಿ ಅಂಚಿನ ಬಚ್ಚ ಕಾಸೆ ಪಂಚೆ ತಪ್ಪಿದ್ದಿಲ್ಲ. ನಿತ್ಯಕ್ಕೂ ವಿಶೇಷಕ್ಕೂ ಅದು ಅವನ ಅಂತಸ್ತಿನ ಕುರುಹು. ಮೇಲೆ ಉಡುಗೆಯಂತೆಯೇ ಕಾಣುವ, ಎದೆಹಲಗೆಯ ಮೇಲೆ ಸುಣ್ಣದ ಬರಹದಂತೆ ಎದ್ದು ಕಾಣುವ ಜೋಡಿ ಜನಿವಾರ. ಅದನ್ನು ಕಂಡ ನೆರೆಕರೆಯ ಮಕ್ಕಳು "ಅಕ್ಕಸಾಲಿ, ಊರಿನ ತೇರು ಯಾವಾಗ?" ಎಂದು ಕೇಳುವು ದುಂಟು. ಇವನು ತಿಳಿಯದೆ "ಇಂದಿಗೆ ತಿಂಗಳಲ್ಲಿ" ಅಂದರೆ, "ಹಾಗಾದರೆ 'ವೀಣೆ' ಈಗಲೇ ಹೊರಗೆ ತೆಗೆದು ಹೆಗಲ ಮೇಲೆ ಇರಿಸಿಕೊಂಡೆಯೇನು" ಎಂದು ನಕಲಿ ಮಾಡುತ್ತಾರೆ.

ತಲೆಯಿಂದ, ಎದೆಗೆ ಬಂದೂ, ಕಾಲಿಗೆ ಇಳಿದರೆ ಅಲ್ಲೂ ಅಲಂಕಾರವಿದೆ; ಒಕ್ಕಾಲಿಗೊಂದು ಬೆಳ್ಳಿಯ ಸರಿಗೆಯಿದೆ. ವೆಂಕಟರಮಣನಿಗೆ ಅದು ಹರಕೆ. ವೆಂಕಟರಮಣ ತಿರುಪತಿಯಿಂದ ಈ ತಿಮ್ಮಪ್ಪನನ್ನು ಕಾಣಲು ಬರುವ ಹಾಗೂ ಇಲ್ಲ; ಈ ತಿಮ್ಮಪ್ಪ ತಿರುಪತಿ ತಿಮ್ಮಪ್ಪನನ್ನು ನೋಡಲು ಹೋಗುವ ಹಾಗೂ ಇಲ್ಲ. ಹೀಗಾಗಿ ಹುಟ್ಟಿದ ಒಂದು ವರ್ಷದಲ್ಲಿ ತೊಟ್ಟ ಆ ಸರಿಗೆ ಇಷ್ಟು ಸಮಯದ ಬಳಿಕವೂ ಅಲ್ಲೇ ಇದೆ. "ಯಜಮಾನರು ತಿರುಪತಿಗೆ ಹೋಗುವಾಗ ಕಲಿಯುಗವೇ ಮುಗಿಯುತ್ತದೆ" ಎಂದು ಅವನ ಹೆಂಡತಿ ಹೇಳುತ್ತಿರುತ್ತಾಳೆ.

ಚಿನ್ನವನ್ನೂ ಬೆಳ್ಳಿಯನ್ನೂ ಬೆಣ್ಣೆಯಂತೆಯೇ ತೀಡಬಲ್ಲ ಕುಶಲಿಗರು

ತಿಮ್ಮಪ್ಪನನ್ನು ಬಿಟ್ಟರೆ ನಮ್ಮ ಊರಿನಲ್ಲಿ ಯಾರೂ ಇಲ್ಲ; ಸುತ್ತುಮುತ್ತಲೂ ಇರಲಿಕ್ಕಿಲ್ಲ. ಅಲ್ಲವಾದರೆ ನಾಲ್ಕು ಸುತ್ತಲಿನ ಹಳ್ಳಿಯವರೆಲ್ಲರೂ, ಆತನ ಮನೆಯ ಜಗಲಿಯ ತನಕ ಜೀವಬಿಟ್ಟು ಓಡಿಬರುತ್ತಿರಲಿಲ್ಲ. ಅವನ ಮನೆಯಲ್ಲಿ ಕೆಲಸಗಾರನೆಂದರೆ ಅವನೊಬ್ಬನೇ. ಊದಿದಾರಕ್ಕೆ ನೇವಳ ನೇಯುವುದಾದರೆ ಅವನ ಹೆಂಡತಿ ಸಹಾಯ ಮಾಡುತ್ತಾಳೆ. ಅವನಿಗೆ ಮಕ್ಕಳು ಇಲ್ಲವೇ–ಎಂದರೆ 'ಉಂಟು'; ಒಂದು ಆರು ವರ್ಷದ ಕೂಸಿದೆ. ಅದರಿಂದ ಲೂಟಿಯೇ ಹೊರತು ಸಹಾಯವಿಲ್ಲ. ಅವನ ಈ ಕುಮಾರ ಕಂಠೀರವನಿಂದಾಗಿ ಮದ್ದಲೆಗೆ ಆರು ಸಾರಿ ಚರ್ಮ ಹಾಕಿಸಿಯಾಯಿತಂತೆ. ಅಗ್ಗಿಷ್ಟಿಕೆ ಹತ್ತು ಸಾರಿ ಹೊಸದಾಗಿ ಬಂತು. 'ಅಬ್ಬಾ, ಇದು ಯಾವ ಕುಲದಲ್ಲಿ ಹುಟ್ಟಿತು!' ಎಂದು ಮಗುವನ್ನು ಕಂಡು ವಿಸ್ಮಯ ಪಡುವ ಪ್ರಸಂಗ ದಿನಕ್ಕೆ ಎಂಟು ಸಾರಿ ಬರುತ್ತದೆ. ಕೊನೆಗೆ ಆತ 'ಮಕ್ಕಳ ಜಾತಿಯಲ್ಲವೆ!' ಎಂದು ತೀರ್ಮಾನಿಸಿ, ತನಗೆ ತಾನೇ ಸಮಾಧಾನ ತಂದುಕೊಳ್ಳುತ್ತಾನೆ.

ತಿಮ್ಮಪ್ಪನ ಕೆಲಸದ ಸಂಗತಿಯನ್ನು ಕುರಿತು ನಿಧಾನವಾಗಿ ತಿಳಿದರೂ ಚಿಂತೆಯಿಲ್ಲ; ಅವನ ಮದ್ದಲೆಯ ಸಂಗತಿಯನ್ನು ಮೊದಲು ಕೇಳಬೇಕು. ಅಕ್ಕಸಾಲಿ ತಿಮ್ಮಪ್ಪ ಎಂದು ಕರೆಯುವ ಬದಲು, ಮದ್ದಲೆ ತಿಮ್ಮಪ್ಪನೆಂದರೆ ಅವನಿಗೆ ತುಂಬ ಸಂತೋಷ. ಅವನ ಕಸಬೇ ಮದ್ದಲೆಯದು. ಅಡ್ಡ ಕಸಬು 'ಚಿನ್ನದ್ದು' ಎಂದರೂ ತಪ್ಪಿಲ್ಲ. ಅಲ್ಲದೆ ಚಿನ್ನದ ಕೆಲಸವೆಂದರೆ ಯಾರ್‍ಯಾರ ಮನೆಯ ಹೆಂಗಸರನ್ನು ಮೆರೆಯಿಸುವ ಕೆಲಸ; ಹೊಟ್ಟೆಯ ಪಾಡಿನ ದುಡಿತ. ಇದಾದರೆ ಹಾಗಲ್ಲ! ಹೊಟ್ಟೆಗಿರಲಿ, ಇಲ್ಲದಿರಲಿ—ನಿತ್ಯ ಸಾಗಿಸುವ ಬಡಿತ.

ತಿಮ್ಮಪ್ಪ ಅಕ್ಕಸಾಲಿಯ ಮನೆಗೆ ಸಮೀಪವಾಗಿ, ಒಬ್ಬಿಬ್ಬರು ಬುದ್ಧಿ ಕೆಟ್ಟೋ, ಗ್ರಹಚಾರ ಹಿಡಿದೋ, ಮನೆ ಮಾಡಿಕೊಂಡು ನರಳುತ್ತಿರುವವರಿದ್ದಾರೆ. ಮಧ್ಯಾಹ್ನ, ಮುಸ್ಸಂಜೆ, ಮಧ್ಯರಾತ್ರಿಯೆಂಬ ಭೇದವಿಲ್ಲದೆಯೇ ಅವನ ಮನೆ ಜಗಲಿಯಲ್ಲಿ ಉದ್ಭವಿಸಿ, ಅಂಗಳಕ್ಕೆ ಧುಮುಕಿ, ಬೇಲಿಹಾಯ್ದು ನೆರೆಮನೆಯ ಅಂಗಳವನ್ನು ಸೇರುವ ಅವನ ಮೃದಂಗದ ಧ್ವನಿಗಳು ಯಾವ ದಿವಸವೂ ನಿಂತುದೆಂಬುದಿಲ್ಲ. ಆ ನೆರೆಕರೆಯವರಿಗೆ ಸಾಮಾನ್ಯ ರಸ್ತೆಯಲ್ಲಿ ಸಂಚರಿಸುವ ಮೋಟಾರು ಹಾರ್ನು, ಘರ್ಜನೆಗಳು ಕೇಳುವುದೆಂಬುದೇ ಇಲ್ಲ. ಕಿವಿಗಳು ಅಷ್ಟು ಕೆಪ್ಪುಹಿಡಿದು ಹೋಗಿವೆ. ಆದರಿಂದಲೇ ನೆರೆಕರೆಯವರ ಶಾಪ ತಿಮ್ಮಪ್ಪನಿಗೆ ತಪ್ಪಿದುದಲ್ಲ. ಶಪಿಸಿ, ಶಪಿಸಿ, ದಣಿದು 'ಅಕ್ಕಸಾಲಿಗೆ

ಬೇರೆಕೆ ಲಸ ಇಲ್ಲವೆಂದು ಕಾಣುತ್ತದೆ'- ಎಂಬುದು ಅವರ ತೀರ್ಮಾನ. ಅವನ ಮನೆಯಿಂದ ಮದ್ದಲೆ 'ಪಿಟ್ಟೆ'ಂದರೆ ಸಾಕು, ಇಂಥವರೇ ಅದನ್ನು ಬಡಿಯು ತ್ತಿದ್ದಾರೆಂದು ನೆರೆಮನೆಯವರು ಹೇಳಬಲ್ಲರು. 'ಯಾರು, ತಿಮ್ಮಪ್ಪನೋ, ಅಲ್ಲ....ಅವನ ಹೆಂಡತಿಯೋ ಅಲ್ಲ ....ಬಿದ್ನೋರು ಯಾರೋ....ಹೊಸ ಕೈ' ಎನ್ನುತ್ತಾರೆ.

ತಿಮ್ಮಪ್ಪನ ಮದ್ದಲೆಯ ಕೈ ಮಾತ್ರ ಬಲು ಚುರುಕಿನದು. ಆ ಬೆರಳು ಗಳು ಮದ್ದಲೆಯ ಮೇಲೆ ಆಡುವುದನ್ನು ಕಂಡರೆ 'ಅಬ್ಬಾ' ಎಂದು ತಬ್ಬಿ ಬ್ಬಾಗಬೇಕು. ಈ ಕೆಲಸ ಮುಗಿಸಿ ಎಲ್ಲಿಗೋ ಹೊರಡಬೇಕು ಎಂಬ ತರಾ ತುರಿ ಅವನ ಬೆರಳುಗಳಿಗೆ ಯಾವಾಗಲೂ ಇರುವಹಾಗಿದೆ. ನಿಜ-ಅಂದರೆ ತಿಮ್ಮಪ್ಪ ಮನೆಯಲ್ಲಿ ಬಾರಿಸುವುದು ಸಾಧನೆಗೆ; ಹೊರಗೆ ಎಲ್ಲಾದರೂ ಆಗುವ ತಾಳಮದ್ದಲೆ ಕೂಟಗಳಿಗೆ ಸಿದ್ಧತೆ. ಊರಿನ ಯಾವ ತಾಳಮದ್ದಲೆ ಕೂಟದವರೂ ತಿಮ್ಮಪ್ಪನನ್ನು ಕರೆಯಿಸದೆಯೇ ಇಲ್ಲ. ಬರಿಯ ವಾದನ ವೊಂದರಲ್ಲೇ ತಿಮ್ಮಪ್ಪನ ಜಾಣ್ಮೆ ಸರಿಯಲ್ಲ. ಅರ್ಥದಲ್ಲೂ ಬಾಯಿ ಹಾಕಿ ಯಾನು. ಆದರೆ ಅವನ ಮೆಚ್ಚಿಕೆಯ ಅರ್ಥಗಳೆಲ್ಲವೂ ಸ್ತ್ರೀ ಪಾತ್ರಗಳೇ, ಒಂದೋ ಪ್ರಮೀಳೆ, ಒಂದೋ ದ್ರೌಪದಿ, ಒಂದೋ ಸೀತಾಮ್ಮನವರು ಆಗಿ ಅರ್ಥವಹಿಸಿ, ಒಡ್ಡೋಲಗದಲ್ಲಿ ಕುಳಿತು, ತುರುಬಿಗೆ ಮಲ್ಲಿಗೆ ಹೂವಿನ ತುಂಡನ್ನು ಸಿಕ್ಕಿಸಿಕೊಂಡು 'ಆಹಾ, ನನ್ನ ನಾಥಾದಿನಾಥ' ಎಂದು ಧ್ವನಿ ಹೊರಡಿಸಿದ ಎಂದರೆ 'ಹೆಣ್ಣು ಎಂದರೆ ಥೇಟು ಹೆಣ್ಣು' ಎಂಬ ಬೆರಗು ಸಭೆಗೆ ಉಂಟಾಗಬೇಕು.

ಗೃಹಕೃತ್ಯದ ವಿಚಾರವಾಗಿ ತಿಮ್ಮಪ್ಪನನ್ನು ಕೇಳಲೇಬೇಡಿ. 'ತಿಮ್ಮಪ್ಪ, ನಿನಗೆ ಮನೆಯಲ್ಲಿ ಊಟ ಎಷ್ಟು' ಎಂದು ಕೇಳಿದರೆ ಲೆಕ್ಕಮಾಡಿಯೇ ಹೇಳ ಬೇಕು. ಇನ್ನು ಹಲವು ದಿನಗಳಲ್ಲಿ ಊಟವಿದ್ದರೆ ಉಂಟು, ಇಲ್ಲವಾದರೆ ಇಲ್ಲ. ಇದ್ದ ದಿವಸ ಮಧ್ಯಾಹ್ನದ ಊಟವು ಹೊತ್ತು ತಿರುಗಿ ಒಂದು ಜಾವದ ಬಳಿಕ, ರಾತ್ರಿಯ ಊಟ-ಕತ್ತಲಾಗಿ, ದೀಪ ಹಚ್ಚಿ ಅಂಗಡಿಗೆ ಹೋಗಿ, ಅಕ್ಕಿ ತಂದು, ಮದ್ದಲೆ ಹಿಡಿದು ನಾಲ್ಕು ಆವರ್ತನೆ ಬಾರಿಸಿ, ಕುರುಡು ದೀಪದ ಬೆಳಕಿಗೆ ಏನಾದರೂ 'ಕೊಟ ಕೊಟ' ಮಾಡಿ ಮುಗಿಸಿದ ಮೇಲೆ. ಆದರೆ ಮದ್ದಲೆಯನ್ನು ದಿವಸಕ್ಕೆ ಮೂರು ಆವೃತ್ತಿಯಾದರೂ ಹೊರತೆಗೆದು ತಿಕ್ಕಿ, ತೀಡಿ, ಬಡಿದಾನು.

ಆದರಾತಿಥ್ಯದಲ್ಲಿ ತಿಮ್ಮಪ್ಪನನ್ನು ಬಿಟ್ಟರಿಲ್ಲ. ಅವನ ಜಾತಿಯವರಲ್ಲಿ ಅವನಿಗೆ ಬಹಳ ಸಮೀಪದವರಲ್ಲದ ಜನರೇ ಇಲ್ಲ. ಯಾವಾಗಲಾದರೂ ಒಂದು ದಿವಸ ನೆರೆಮನೆಯವರು ಬಂದು —"ತಿಮ್ಮಪ್ಪ, ಆದ್ಯಾರು, ನಿನ್ನೆ ಪ್ರಾಣ ಹೋಗುವವರ ಹಾಗೆ ಮದ್ದಲೆ ಬಡಿಯುತ್ತಿದ್ದವರು? ಹಾಗೆ ಬಡಿದರೆ ಕೈ ಉಳಿದೀತೇ? ಕರ್ಣ ಹ್ಯಾಗೂ ಉಳಿಯಲಿಕ್ಕಿಲ್ಲ" ಎಂದು ದೂರುತ್ತಾರೆ. ತಿಮ್ಮಪ್ಪ ನಗುತ್ತ," ಅದೋ...ನಮ್ಮ ಅಕ್ಕನ...ಅಂದರೆ ದೊಡಜ್ಜಿ ಚಿಕ್ಕಮ್ಮನ ಮೊಮ್ಮಗಳು....ಅವಳು....ತಿಳಿಯಲಿಲ್ಲವೆ? ಆ ಕಾವೇರು ಮಗನಿಗೆ ಹೆಣ್ಣು ತಂದಿತಲ್ಲ. ಆ ಮನೆಯವರಿಗೆ ಬಹಳ ಸಮೀಪ.

"ಮದ್ದಲೆ—ಎಂದರೆ ಅಭ್ಯಾಸ. ಇನ್ನು ಸ್ವಲ್ಪ ಕೈ ತಿದ್ದಿದರೆ ಹುಡುಗ ಹುಷಾರಾದನು. ಅವನದು ಭಾರೀ ಚುರುಕಿನ ಕೈ ನೋಡಿ; ಒಳ್ಳೇ ಬಾರಿಸಿ ಯಾನು ಮುಂದಕ್ಕೆ. ಅಂದರೆ ಬಾರಿಸುವ ಗತ್ತನ್ನು ಬಲ್ಲ."

ಅವರ ಮನೆಗೆ ನಂಟುತನ ಎಣಿಸಿಕೊಂಡು ಯಾರೇ ಬರಲಿ, ಅವರ ವಿಷಯದಲ್ಲಿ ತಿಮ್ಮಪ್ಪನಿಗೆ ತುಂಬಾ ಆತ್ಮೀಯತೆ. ಅವನ ಮನೆಗೆ ಬರುವ ನಂಟರ ಸಂಖ್ಯೆ, ಅವರು ಬಂದಾಗ ಮನೆಯಲ್ಲಾಗುವ ಗದ್ದಲ, ಇವುಗಳ ನ್ನೆಲ್ಲ ನೋಡಿದರೆ 'ನಂಟರು ಬಂದಾಗಲೇ ತಿಮ್ಮಪ್ಪನಿಗೆ ಊಟ; ಉಳಿದ ದಿವಸಗಳಲ್ಲಿ ಉಪವಾಸ' ಎಂಬ ಸಂಶಯ ಬರುತ್ತದೆ. ಆದರೆ ಆತ ತನ್ನ ಕೆಲಸ ಮನಸ್ಸು ಇರಿಸಿ ಮಾಡಿದರೆ ದಿನಕ್ಕೆ ಐದು ರೂಪಾಯಿಗಳನ್ನಾದರೂ ದುಡಿದಾನು. ಅವನ ಕೈಯೂ ಚುರುಕು, ಕೆಲಸವೂ ನಾಜೂಕು.

ನಮ್ಮ ಗ್ರಾಮದಲ್ಲಿ ಚಿನ್ನದ ಗಿರ ಯಾರಿಗೆಲ್ಲ ಇದೆಯೋ ಅವರು ವಾರಕ್ಕೊಮ್ಮೆಯಾದರೂ ತಿಮ್ಮಪ್ಪನ ಚಾವಡಿಯನ್ನು ತುಳಿಯದೆ ಹೋಗು ವುದಿಲ್ಲ.

"ತಿಮ್ಮಪ್ಪ, ಕಳೆದ ಕೊಡಿ ಹಬ್ಬಕ್ಕೆ ನಿನಗೆ ಕೊಟ್ಟ ನೇವಳ ಏನು, ನಾಳೆ ನನ್ನ ಮಗಳ ಮದುವೆ ಸಮಯಕ್ಕಾದರೂ ಸಿಕ್ಕೀತೇ? ಮಗಳ ಚಿನ್ನ ನಿನ್ನಿಂದಲೇ ಮಾಡಿಸಬೇಕೆಂದರೆ, ಕೊಟ್ಟರೆ ಮದುವೆ ಮುಗಿದರೂ ಸಿಗಲಿಕ್ಕಿಲ್ಲ ಎಂಬುದು ಖಂಡಿತ."

ಇನ್ನು, ಮಗಳ ಮದುವೆಗೆಂದು ಚಿನ್ನಾಭರಣ ಮಾಡಿಸಲು ಕೊಟ್ಟವರ ಅವಸ್ಥೆಯನ್ನು ಕೇಳುತ್ತೀರಾ? ಮದುವೆ ನಾಳೆಗೆಂದರೆ ಇವೊತ್ತು ಮಧ್ಯಾಹ್ನದ ತನಕವೂ ಕೊಪ್ಪು, ಬುಗುಡಿ, ತಾಳಿ ಯಾವುದೂ ಆಗಿರಾವುದಿಲ್ಲ. ಈಗ ಬಂದ್ರ

ನೀವು ಮನಸೋ ಇಚ್ಛೆ ತಿಮ್ಮಪ್ಪನಿಗೆ ಮಂಗಳಾರತಿ ಮಾಡಿ ಹೋದಿರಾದರೆ ಅವನು ಕುಳಿತಲ್ಲಿಂದಲೇ, ಬದಿಗೆ ತಿರುಗಿ, ತಂಬುಲವನ್ನು ಹಲ್ಲಿನೆಡೆಯಿಂದ ಧಾರೆಯಾಗಿ ಚಿಮ್ಮಿ, ಆ ಮೇಲೆ ನಿಮ್ಮ ಮುಖ ನೋಡಿ "ಹೂಂ. ನಿಮ್ಮ ಗಡಿಬಿಡಿ ಕಂಡರೆ ದಿಕ್ಕಿಲ್ಲ. ನಾಳೆ ಗೋಧೂಳಿ ಲಗ್ನವಷ್ಟೆ. ನಿಮಗೆ ಲಗ್ನಕ್ಕೆ ಹರಕತ್ತು ಆಗದಿದ್ದರೆ ಸರಿಯಲ್ಲ. ದಿಬ್ಬಣದ ಗರ್ನಾಲು ಕೇಳಿಸಿತು - ಎಂದ ಕೂಡಲೇ ಜನ ಬರಲಿ" ಎಂದು ಆಶ್ವಾಸನೆಯನ್ನು ಕೊಟ್ಟು ಕಳುಹಿಸುತ್ತಾನೆ. ಅವರ ಎದುರಿಗೇನೆ ಅವರ ಚಿನ್ನವನ್ನು ಕಾಯಿಸಿ ಹಿಡಿದು, ಬಡಿಯತೊಡಗುತ್ತಾನೆ. ಅವರು ಬೆನ್ನುಹಾಕಿದ ಮರುಕ್ಷಣವೇ ಅದನ್ನು ಮಗ್ಗುಲಿಗಿರಿಸಿ, ಇನ್ನೇನಾದರೂ ಒಂದು ತರಾತುರಿಯ ಕೆಲಸವನ್ನು ತೆಗೆದುಕೊಳ್ಳುತ್ತಾನೆ. ಅದಕ್ಕಾಗಿ ಕಾದು ಕುಳಿತವರೂ ಎದುರಿಗೇ ಇರುತ್ತಾರೆ.

ಹೀಗೆ ಒಮ್ಮೊಮ್ಮೆ ಮೂರು, ನಾಲ್ಕು ಲಗ್ನದ ಕುಳವಾರುಗಳ ಜುಟ್ಟು ಅವನ ಮುಷ್ಟಿಯಲ್ಲಿರುತ್ತದೆ. ಆ ರಾತ್ರಿಯೂ ಮದ್ದಲೆಯನ್ನು ಹೊರಕ್ಕೆ ತೆಗೆಯುತ್ತಾನೆ. ಅವನ ಮದ್ದಲೆ ಪೆಟ್ಟನ್ನು ಕೇಳಿ, ನಾಳೆ ಚಿನ್ನ ಸಿಗುತ್ತದೆ ಎಂದು ಆಸೆ ಮಾಡಿದವರ ಎದೆಯಲ್ಲಿ ಡಬ ಡಬ ಆಗುತ್ತಿರುತ್ತದೆ ನಡು ರಾತ್ರಿ ಕಳೆದ ಮೇಲೆ ಮದ್ದಲೆಯನ್ನು ಮಾಡಿನ ಬಿದಿರಿನ ಕೊಪ್ಪಿಗೆ ತೂಗಿ• ಅದ್ಗಣೆ ಕುಟ್ಟಲು ಕೂಡುತ್ತಾನೆ. ಮಿಣಮಿಣ ದೀಪದ ಬೆಳಕಿನಲ್ಲಿ-ಕಾಯಿಸುವುದು, ಕುಟ್ಟುವುದು, ನಡುನಡುವೆ ತಂಬುಲ ತುಪ್ಪುವುದು-ಏಕಗತಿಯಿಂದ ಬೆಳಗಿನ ತನಕ ನಡೆಯುತ್ತದೆ. ಬೆಳಗಿನ ಜಾವದ ನಿದ್ರೆಯ ಅಮಲಿಗೆ, ನೆರೆಕರೆಯ ಅವನ ಕುಳುವಾರುಗಳು ಸುತ್ತಿಗೆ ಬಡಿತವನ್ನು ಕೇಳಿಯೇ ಚೈತನ್ಯ ತಾಳಬೇಕು.

ಸರಿ—ಬೆಳಗಾಯಿತು, ಮಧ್ಯಾಹ್ನವೂ ಆಯಿತು. ಹೊತ್ತು ತಿರುಗಿತು; ಗೋಧೂಳಿಗೆ ಎರಡು ಗಳಿಗೆಯಿದೆ. ಮದುವೆ ದಿಬ್ಬಣ ಹೊರಟಿತು. ಮೊದಲಿನ ಗರ್ನಾಲು ಗಗನಕ್ಕೇರಿ ಢಂ ಅನಿಸುವ ಮೊದಲೇ ಮೇಲುಸಿರು ಸಿಕ್ಕಿಕೊಂಡ ಮೂರು ಮದುವೆ ಕುಳುವಾರುಗಳು, ತಿಮ್ಮಪ್ಪನ ಅಗ್ಗಿಷ್ಟಿಕೆಯ ಮುಂದೆ ಬಂದು ಪಿಳಿಪಿಳಿ ನೋಡುತ್ತಿರುತ್ತಾರೆ. 'ಯಮದೂತರು ಬಂದರು' ಎಂದು ತಿಮ್ಮಪ್ಪನ ಮನಸ್ಸು ಹೇಳುತ್ತದೆ ಒಳಗಿಂದೊಳಗೇ.

"ಈಗ, ಈಗ, ತಕ್ಷಣ ಒಪ್ಪೆ ಹಾಕಿದರಾಯಿತು...."

"ಏನೋ ಅಪ್ಪ ...ಅವಸರದಲ್ಲಿ ಒಂದಕ್ಕೊಂದು ಮಾಡಿ....ಹೂಂ....

ನಿನ್ನನ್ನು ನಂಬಿದರೆ...." ಎಂದು ಅವರು ತಳಮಳಿಸುವುದನ್ನು ಕಾಣಬೇಕು! ಅದನ್ನು ಕಂಡ ಹಾಗೆಯೇ ತಿಮ್ಮಪ್ಪನ ಕೈಗಳು ಕುಣಿಯುವುದನ್ನೂ ನೋಡ ಬೇಕು. 'ಆಪದ್ಬಾಂಧವ, ಅನಾಥ ರಕ್ಷಕ ತಾನು' ಎಂಬಷ್ಟು ಹೆಮ್ಮೆಯಿಂದ ತಿಮ್ಮಪ್ಪ ತನ್ನ ಕೆಲಸ ಮುಂದುವರಿಸುತ್ತಾನೆ.

ಒಪ್ಪೆ ಹಾಕಿ, ಬಟ್ಟೆಯಿಂದ ಉಜ್ಜುತ್ತಾನೆ; ಅಷ್ಟರಲ್ಲೇ ಹರಕತ್ತಿನ ಕುಳುವಾರುಗಳು "ಕೊಡು, ಕೊಡು....ದಿಬ್ಬಣ ಚಪ್ಪರ ಹೊಕ್ಕಿತು; ಮಧು ಮಗಳಿಗೆ ಯಾವಾಗ ಇನ್ನು ಸಿಂಗಾರ? ಮುಹೂರ್ತ ಕೆಡಿಸುತ್ತೀಯ ನೀನು" ಅನ್ನುತ್ತಿರುತ್ತಾರೆ.

ತಿಮ್ಮಪ್ಪ ಮೆಲ್ಲಗೆ "ಹರಕತ್ತು ಎಂದರೆ ಒಬ್ಬರ ಚಿನ್ನ ಒಬ್ಬರಿಗಾಗ ಬಾರದಲ್ಲ. ಹೂಂ, ಎಲೆಯಡಿಕೆಯ ಚೀಲ ಇಲ್ಲಿದೆ? ಗಡದ್ದಿನಲ್ಲಿ ಒಂದು ಒಂದು ವೀಳೆಯ ಹಾಕಿ" ಎನ್ನುತ್ತಾನೆ.

"ನಿನ್ನ ವೀಳೆಯಕ್ಕೆ ಕಿಚ್ಚಿಡು; ನಮಗೆ ಅವಸರ ಅಂದರೆ ಇವನಿಗೆ ತಮಾಷೆ. ಇಲಿಗೆ ಪ್ರಾಣಸಂಕಟ ಬೆಕ್ಕಿಗೆ ಏನೋ ಅಂದ ಹಾಗೆ".

"ಮಹಾರಾಯರೇ, ಯಮನಾದರೂ ಈ ರೀತಿ ಮಾಡಲಾರ. ನೋಡಿ, ನಿನ್ನೆ ಬೈಹೊತ್ತಿಗೆ ಕುಳಿತವ ಏಳಲಿಲ್ಲ. ಈಗಷ್ಟೆ ತಂಬುಲ ತುಪ್ಪುತ್ತಿದ್ದೇನೆ." ಹೀಗೆಂದು ವಿರಾಮದಿಂದ ಎಲೆ ಅಡಿಕೆ ಮೆದ್ದು, ಚಿನ್ನವನ್ನು ತೂಗಿ, ಅವರ ಮುಂದೆ ಇರಿಸಿ "ಇದು ಹಣವೂ ಬೇಳೆ ತೂಕ. ಈ ಬೆಳ್ಳಿ ಮೂರುವರೆಯೂ ಹಾಗ...." ಎಂದು ಲೆಕ್ಕಾಚಾರ ಹಾಕಿ, ಅವರಿಗೆ ಒಪ್ಪಿಸಿ "ಏನೆಂದು ತಿಳಿದಿರಿ? ತಿಮ್ಮಪ್ಪ ಎಲ್ಲ ಆಕ್ಕಸಾಲಿಗಳಂತೆ ಎಂದು ತಿಳಿದಿರಾ?" ಎಂದು ವೀರ ವಾಕ್ಯ ಗಳನ್ನಾಡುವಾಗ, ಕುಳುವಾರುಗಳೆಲ್ಲಿ? ಅವರು ಜಗುಲಿಯನ್ನಿಳಿದು, ತೊಡಮೆ ದಾಟಿ, ಮನೆಯ ಹಾದಿಯಲ್ಲಿ ಅರ್ಧ ದೂರ ಹೋಗಿಯೂ ಆಯಿತು.

ಅಲ್ಲಿಂದ ತಿಮ್ಮಪ್ಪ ಕಾಲು ಸಡಿಲಿಸಿ, ಆಕಳಿಕೆ ತೆಗೆದು 'ಹೂಂ, ಇವಳೇ' ಎಂದು ಯಜಮಾನಿಯನ್ನು ಕೂಗಿದರೆ, ಅವಳು ಅಡಿಗೆ ಮನೆಗೆ ಚಿಲಕ ಹಾಕಿ ದಿಬ್ಬಣ ಎದುರುಗೊಳ್ಳುವುದನ್ನು ನೋಡಲು ನಾಲ್ಕು ಗಳಿಗೆ ಮೊದಲೇ ಹೋಗಿದ್ದಾಳೆ. ತಿಮ್ಮಪ್ಪನ ಕೋಪಕ್ಕೆ ಯಾರೂ ಇಲ್ಲದಾಗ ಆರ್ಭಟೆ ಅಧಿಕ! "ನೀವು ಮನುಷ್ಯರಲ್ಲ; ಇಲ್ಲಿ ನಾನು ಅನ್ನ ನೀರಿಲ್ಲದೆಯೇ ಸತ್ತರೆ ನಿಮಗೇನು? ನೀವೆಲ್ಲ ಯಾರ್ಯಾರ ಮನೆಯ ದಿಬ್ಬಣಕ್ಕೆಂದು ಥಕಪಕ ಮಾಡಿ ಹೋಗಿಯಾ ಯಿತು. ಇಷ್ಟಿಷ್ಟೂ ಸುಖ ದುಃಖವಿಲ್ಲ" ಎಂದು ಕೊಂಡು. ಅಲ್ಲೇ ಸಿಟ್ಟನ್ನು

ನುಂಗಿಕೊಳ್ಳುತ್ತಾನೆ.

ನಿಜಕ್ಕೂ ತಿಮ್ಮಪ್ಪನ ಹೊಟ್ಟೆ ವೈಶಾಖ ಮಾಸದ ಮಧ್ಯಾಹ್ನದ ಹೊಯಿಗೆ ದಾರಿ ಕಾಯುವಂತೆ ಕಾದಿದೆ. ತಾನೇ ಒಳಗೆ ಹೋಗಿ ಅಡುಗೆ ಮನೆ ಜಡ್ತಿ ಮಾಡಿದರೆ, ಅಲ್ಲಿ ಬೆಂಕಿ ಹೊತ್ತಿಸಿದ ಕುರುಹಿಲ್ಲ. ತಂದಿರಿಸಿದ ಅಕ್ಕಿ ಬೇಕಷ್ಟೆ? ಈಗ ಬಂದ ಮಜೂರಿಯಲ್ಲಿ, ನಾಲ್ಕಾಣೆ ಹಿಡಿದುಕೊಂಡು ಪೇಟೆಗೆ ಹೋಗಿ ಎರಡು ಸೇರು ಅಕ್ಕಿ ತರಬೇಕು ಅವನೇ. ಅದಕ್ಕೂ ಉದಾಸೀನವಾಗಿ "ಹಾಳಾಗಲಿ ಸಂಸಾರ" ಎಂದು ಕಾಲುಕಟ್ಟಿ, ಜಗುಲಿಯ ಮೇಲೆ ಕುಳಿತುಬಿಟ್ಟ. ಆ ಬಳಿಕ ಸ್ಫೂರ್ತಿಯಿಂದ 'ತಮ್ಮಾ....ಅಡವಿ ಕಲ್ಮುಳ್ಳುಗಳು ಕಾಣುತಿದೇ ತಮ್ಮಾ....'ಎಂದು ಪಂಚವಟಿಯ ರಾಮನ ವಿಲಾಪವನ್ನು ತಾನು ಹಾಡುತ್ತ, ಮದ್ದಲೆಯ ಹತ್ತಿರಕ್ಕೆ ಹೋಗಿ, ಶ್ರುತಿ ಸರಿಯಾಗಿದೆಯೋ ಎಂದು ನೋಡಲಿಕ್ಕೆ ಕುಳಿತುಕೊಂಡಾನು.

ತಿಮ್ಮಪ್ಪನಿಗೂ ನಮ್ಮ ಊರಿಗೂ ಏನು ಸಂಬಂಧ—ಎಂದು ಕೇಳಿದರೆ, ಒಂದೇ ಒಂದು ಉತ್ತರ: 'ಅದ್ಗಣಿ ಬಡಿಯುವುದು; ಕರ್ಣ ತೀಡುವುದು; ತಪ್ಪಿತು— ಕರ್ಣ ತೀಡುವುದು, ಅದ್ಗಣಿ ಕುಟ್ಟುವುದು.'



# ೭ ಪಾಟಾಳಿ ಪರಮಯ್ಯ

ಪಾಟಾಳಿ ಪರಮಯ್ಯ ಎಂಬರೆ ನಮ್ಮೂರಿನ ಹತ್ತು ಸಮಸ್ತರಲ್ಲಿ ಒಬ್ಬ. ಯಾವುದೇ ಪಂಚಾಯತಿಕೆ ನಡೆಯುವುದಾದರೆ ಅವನಿಲ್ಲದೆ ಆಗು ವುದಿಲ್ಲ. ಆದುದರಿಂದ ಅವನು ಮುಖ್ಯ ಎಂದು ನೀವು ತಿಳಿಯುವುದಾದರೆ ಆ ಮುಖ್ಯತನ ಪರಮಯ್ಯನಿಗಿಲ್ಲ. ಪರಮಯ್ಯನನ್ನು ಈ ತನಕ ಯಾವು ದೊಂದರಲ್ಲೂ ಪಂಚಾಯತಿದಾರನಾಗಿ ಊರವರು ಕರೆದುದೂ ಇಲ್ಲ; ಅವನು ಮಧ್ಯಸ್ಥಿಕೆಯಲ್ಲಿ ಹೆಸರಾದವನೂ ಅಲ್ಲ. ಅಂಥಾ ಸ್ಥಾನ ಅವನಿಗೆ ದೊರೆಯ ಬೇಕಾದರೆ ಇನ್ನೂ ಒಂದು ಹಾಗ ತೂಕ ಭಾರದಡೆ ಜಾಸ್ತಿಯಾಗಿರಬೇಕು. ಪಾಪದ ಪರಮಯ್ಯನಿಗೆ ಆ ಭಾರದಾನೆ, ವತನ ಎಲ್ಲಿಂದ ಬಂದೀತು? ದುಸ್ತು ಹಾಕಿಕೊಂಡು ಯಾವುದಾದರೂ ಮುಂಜಿ, ಮದುವೆಗಳಲ್ಲಿ ಮುಂದಿನ ಚಾಪೆಯ ಮೇಲೆ ಲೋಡಿಗೆ ಒರಗಿ ಗಂಭೀರವಾಗಿ ಕುಳಿತಿರುವವನೂ ಅಲ್ಲ. ಅವನ ದುಸ್ತು ಅಂದರೆ ನಡುವಿಗೆ ಬಿಗಿಯುವ 'ಪಾಣಿಪಂಚೆ'; ಅದಕ್ಕೆ ಭಡ ತಿಯಾದುದನ್ನು ನಾನು ಕಾಣೆ. ನಮ್ಮೂರ ಉತ್ಸವದ ಸಮಯ ದೇವರು ಬಲಿಬರುವಾಗ ಯಾರ ಕಣ್ಣಾದರೂ 'ಲಾಲಿಸು ಜೀಯಾ, ಮಂತ್ರ ತಂತ್ರ ಸೇವಾಂಲಾಲಯ' ಎನ್ನುವ ಸಮಯದಲ್ಲಾದರೂ ಅವನ ಮೇಲಿರಬೇಕು. ಆಗಲೂ ಸಹ ಅವನು ತೊಡುವುದು ಪಾಣಿಪಂಚೆ. 'ಕಿರೇ ಪಾಣಿ' ಅಲ್ಲವಾ ದರೆ 'ಹಿರೇಪಾಣಿ' ಪಂಚೆ. ಅಲ್ಲಿಂದ ಮೂಡಲ್ಲು ಪಂಚೆಗೂ ಅವನು ಭಡತಿ ಹೊಂದಿದವನಲ್ಲ.

ಅಂದರೆ ಕಾರಣ ಹೀಗೆ – ಪರಮಯ್ಯ ಆಸ್ತಿವಂತನಲ್ಲ. ಇರಲಿಕ್ಕೆ ಒಂದೂವರೆ ಮುಡಿ ಬೀಜ ಬಿತ್ತುವ ಸುಗ್ಗಿ ಗದ್ದೆಯಿದೆ. ಸ್ವಂತ ಸಾಗುವಳಿ ದಾರ ಅವನು. ಆದರೆ ಅದು ಬೇಸಾಯವಾಗಿ ಮನೆಗೆ ಬಂದರೆ ಅದರಲ್ಲಿ ಹುಲ್ಲೂ ಉಳಿಯಲಿಕ್ಕಿಲ್ಲ.... ಅವನ ತಾಯಿ, ಅವನ ಹೆಂಡತಿ, ಮಕ್ಕಳು, ಇಷ್ಟು ಜನ ಉಣ್ಣುವಾಗ ಎಮ್ಮೆಗೆ ಹುಲ್ಲೂ ಹರಹರ.... ಹಾಗಾಗಿ ಅವನು ಬಚ್ಚಖಾನೆ, ಶಾಲುಗಳನ್ನು ಹೊದೆಯುವುದು ಹೇಗೆ? ಇನ್ನು, ಪಾಟಾಳಿ ಕೆಲಸ ಮಾಡಿದ ಬಗ್ಗೆ ದೇವಸ್ಥಾನದಿಂದ ದಿನಕ್ಕೆ ಒಂದು ಸೇರು ಅಕ್ಕಿ ಸಿಗು ತ್ತದೆ. ಅದೂ ನಿತ್ಯವೂ ಅಕ್ಕಿಯನ್ನು, ನೆನೆಯಿಸಿ ಮಧ್ಯಾಹ್ನಕ್ಕೆ ಎರಡು ಮೈಲು

ದೂರವಿರುವ ಊರಿನ ದೇವರಿಗೆ ತೋರಿಸಿ ಹಿಂದಿರುಗಿ ಬಂದಮೇಲೆ.

ಆದರೆ-ಅವನ ಊಟಕ್ಕೆ ಕಡಿಮೆಯಾದ ದಿವಸವಿಲ್ಲ; ಮಿಕ್ಕಿದ್ದೂ ಇಲ್ಲ. ಮನೆಗೆ ಬೇಕಾದ ತರಕಾರಿ ಮನೆಯಲ್ಲಾಗುತ್ತದೆ. ಮನೆ ಮುಂದಿನ ಹುಣಸೆ ಮರ, ಹಿತ್ತಲಿನ ಹಸಿ ಮೆಣಸಿನ ನೆರವು ಅವನಿಗುಂಟು; ಮಳೆಗಾಲ ಬಂದರೆ ಕೆಸವೆ, ಕಣಲೆ ಇವೆ; ಮಳೆ ಕಳೆದರೆ ಹೆಸರು, ಅವಡೆ ಸೊಪ್ಪು, ಹರಿವೆ, ಗೆಣಸು, ಸೌತೆಕಾಯಿ ಅವನ ಮನೆಯ ಖರ್ಚಿಗೆ ತಕ್ಕಷ್ಟು ಆಗುತ್ತವೆ. ಎಣ್ಣೆ ಬಾಬ್ತು ಕೇಳುತ್ತೀರಾ? ಅವನ ಮನೆಯಲ್ಲಿ ಲಾಟಾನು ಹಚ್ಚಿದರೆ ಯಾರ ಕಣ್ಣಿಗೂ ಆಗುವುದಿಲ್ಲ. ಹಿಂದಿನ ಕೆರೆಯ ಮಗ್ಗುಲಲಿನ ಹೊನ್ನೆಕಾಯಿ ಮರ ಕೊಟ್ಟರೆ ಒಂದು ನಾಲ್ಕಾರು ಬೇಳೆ ಮಿಕ್ಕಿಯೇ ಹೊನ್ನೆಣ್ಣೆ ಬರುತ್ತದೆ. ಮನೆಯ ಕಾಲುದೀಪಗಳಿಗೆ ಅಷ್ಟು ಸಾಕು. ಹಾಗೆ ಕಡಿಮೆಯಾದರೆ ದೇವರ ಗುಡಿಯ ಎಣ್ಣೆ ಅಲ್ಪಸ್ವಲ್ಪ ಮಿಕ್ಕಿದರೆ ಅವನ ಮನೆ ದೀಪಗಳಿಗೆ ಕಹಿಕುವಂತಿಲ್ಲ.

ನೀಳ, ತೆಳ್ಳಗಿನ ಶರೀರ ಪಾಟಾಳಿಯದು. ನಮ್ಮ ಊರವರ ಮಟ್ಟಿಗೆ ಪಾಟಾಳಿಯು ಗುಡಿಯ ಮುಂದಿನ ಧ್ವಜಮರವೇ. ಅವನ ಪ್ರಾಯ ನನಗೆ ತಿಳಿದಂತೆ ಐವತ್ತಾದರೂ ಮಿಕ್ಕಿರಬೇಕು. ಆದರೆ ನಾನು ಅವನನ್ನು ಪ್ರಥಮದಲ್ಲಿ ಕಂಡು ವರ್ಷ ಮೂವತ್ತಾದರೂ ಸಂದಿದೆ. ಅಲ್ಲಿಂದಿಲ್ಲಿಯ ತನಕವೂ ಪಾಟಾಳಿಯ ಮೈಯಚ್ಚು 'ತದ್ರೀತಿ' ಇದೆ. ಎರಡು ಹೆಚ್ಚೂ ಇಲ್ಲ; ನಾಲ್ಕು ಕಡಿಮೆಯೂ ಇಲ್ಲ; 'ಉಪ್ಪುನೀರಿಗೆ ಹಾಕಿ ತೆಗೆದ ಕಿರಾಲು ಭೋಗಿ ಎಳ.' ನಾನು ಹಿಂದೆ ಕಂಡಾಗಲೂ ಅವನ ತಲೆಯ ಮೇಲೆ, ನಾಲ್ಕು ಹೌದೊ ಅಲ್ಲವೊ ಎಂದು ಕಾಣಿಸುವ ನೆರೆತ ಕೂದಲುಗಳು ಇದ್ದುವು, ಈಗಲೂ ಹಾಗೆಯೇ ಇವೆ. ಆತ ಮೀಸೆ-ಯಾಕೆಂದು ಇರಿಸುತ್ತಾನೆಯೋ ಪುಣ್ಯಾತ್ಮ! ಉಡುಪಿ ವಠಾರದ ಕಡ್ಡಿ ಮೀಸೆ! ಉಂಟು ಎಂದು ಲೆಕ್ಕಕ್ಕೆ ಹಿಡಿಯುವ ಹಾಗಿಲ್ಲ; ಇಲ್ಲ ಎಂದು ತಪಶೀಲು ಬಿಡುವಹಾಗೂ ಇಲ್ಲ. ಅವನಲ್ಲಿನ ಸಿರಿವಂತಿಕೆ ಎಂದರೆ ಕಿವಿಯ ಎರಡು ಕೆಂಪಿನ ವಂಟಿಗಳು. ವಂಟಿ ನಮಗೆ ಕಾಣಿಸದೆ ಹೋದರೂ, ಅದರ ಹಿಂದಿನ ಒಂದೂವರೆ ಇಂಚಿನ ಕೀಲು ಫರ್ಲಾಂಗು ದೂರದಿಂದ 'ನಾನಿಲ್ಲಿದ್ದೇನೆ' ಎಂದು ಕರೆದು ಹೇಳುತ್ತದೆ. ಇಷ್ಟು, ಗುಡಿಗಾರರು ಬರೆಯುವುದಾದರೆ, ಬರೆಯಬಹುದಾದ ಪಾಟಾಳಿ ಪರಮಯ್ಯನ ಚಿತ್ರ.

ನಿಮಗೆ ಅನಿಸಬಹುದು - ಪರಮಯ್ಯ ಅಂದರೆ ಮುಪ್ಪಿಯ ಹೊರಗಿನ

ಜನ, ಲೆಕ್ಕಕ್ಕೆ ಬರುವ ಬಾಬುತು ಅಲ್ಲ ....ಎಂದು. ಅದೂ ಮಾತ್ರ ಸುಳ್ಳು. ಸೀತೈತಾಳರಿಗೆ ಖ್ಯಾಲು ಬಂದು, ಮುಂದರ್ತಿಯದೋ ಮಾರ್ಣಕಟ್ಟೆಯದೋ ಆಟ ಆಡಿಸಿದರೆ ಊರಿನ ನಾಲ್ಕು ಜನ ಗೃಹಸ್ಥರಿಗೆ ಹೇಳಿಕೆ ಹೋಗಬೇಕು ಅವನ ಮೂಲಕವೇ. ನಮ್ಮೂರ ಬ್ರಾಹ್ಮಣರಲ್ಲಿ ಯಾರ ಮನೆಯಲ್ಲೇ ಆಗಲಿ –ಮಾರುವ ಬಡಕಲು ಎಮ್ಮೆಯಿದ್ದರೆ ಅದರ ಗುಣಾತಿಶಯವನ್ನು ಅಶ್ವ ಮೇಧದ ಕುದುರೆಗೆ ಸಮನಾಗಿ ಬಣ್ಣಿಸಿ, ಆ ಗ್ರಾಮದ ಮಟ್ಟಿಗೆ ಜಾಹೀರು ಗೊಳಿಸಲು ಪರಮಯ್ಯನೇ ಬೇಕು, ಪರಮಯ್ಯನಿಗೆ ನಮ್ಮಲ್ಲಿ ಇಂಥವರ ಮನೆಯ ಗೃಹಕೃತ್ಯದ ವಿಚಾರ ತಿಳಿದಿಲ್ಲ—ಎಂದು ಹೇಳುವ ಹಾಗೆಯೇ ಇಲ್ಲ. ನೀವು ಬಾಯಿ ತೆರೆಯುವ ಮುಂಚೆಯೇ "ಅಮ್ಮ, ನಿಮ್ಮ ಎಮ್ಮೆಗೆ ಕೆರೆದಂಡೆಯಲ್ಲಿ ಬಿದ್ದಾಗ ಕಾಲು ಉಳುಕು ಹಾಗೇ ಉಳಿದಿದೆಯೇನು? ನಾನು ಆ ಚಿಕ್ಕು ಪೂಜಾರಿಯನ್ನು ಬರಲಿಕ್ಕೆ ಹೇಳಲೇ? ಅವನ ಹತ್ತಿರ ಉಳುಕಿಗೆ ಒಂದು ಎಣ್ಣೆಯಿದೆ. ರಾಮಬಾಣ, ರಾಮಬಾಣ" ಅನ್ನುತ್ತಾನೆ. ನಾಳೆ ನಿಮ್ಮ ಮನೆಯಲ್ಲಿ ಮದುವೆ ಇಲ್ಲವೆ ಏನಾದರೊಂದು ಸಮಾರಾಧನೆ ಆಗಲಿದೆ ಎಂದು ಹೇಳುತ್ತೀರಾ? ಪರಮಯ್ಯ ಮುಂಚಿನ ದಿವಸವೇ ಬಂದು "ಅಮ್ಮ ರೆಡಿ....ಉರಾಳರೇ --ಏನೇನು ಕುಂದಾಪುರ ಸಂತೆಯಿಂದ ತರಬೇಕು? ಕಳೆದ ಸಂತೆಯಲ್ಲಿ ಹಸಿಮೆಣಸಿಗೆ ನೂರಕ್ಕೆ ಪಾವಾಣೆ. ತೊಂಡೆಕಾಯಿಗೆ ದುಡ್ಡು. ತೆಂಗಿನಕಾಯಿ ಮಹಾಪ್ರಿಯ ನೋಡಿ; ಚಕ್ರಕ್ಕೆ ಇಷ್ಟು ದಿವಸ ಐದು ಇದ್ದರೆ ಮೊನ್ನೆ ಸಂತೆಯಲ್ಲಿ ಮೂರೇ.

'ಇಗೊಳ್ಳಿ, ಹಲಸಿನ ಕಡಿಗೆ ಕ್ರಯಕ್ಕೆ ತೆಗೊಳ್ಳುವುದು ಬೇಡ; ನಾನು ನಾರಾಯಣ ಹಂದೇರ ಹಿತ್ತಿಲಲ್ಲಿ ಒಳ್ಳೆಯ ಕಡಿಗೆ ನೋಡಿಬಂದಿದ್ದೇನೆ. ನೀವು ಹೋಗಿ' ಮರ್ಯಾದೆ ಹೋಗುತ್ತದೆ' ಅಂದರೆಕೊಡಲಾರೆ ಅನ್ನಲಿಕ್ಕಿಲ್ಲ. ಅಲ್ಲದೆ ನೋಡಿ, ನೀವು ಈ ದಿವಸದಲ್ಲಿ ಏನು ಮಾಡದಿದ್ದರೂ ಅಡ್ಡಿಯಿಲ್ಲ- ಒಂದು ಮಾವಿನ ಕಾಯಿ ಗೊಜ್ಜು, ಒಂದು ಕಡಿಗೆ (ಗುಜ್ಜೆ) ತಾಳ್ಳು, ಒಂದು ಮಟ್ಟಿ ಗುಳ್ಳದ ಹುಳಿ, ಇಷ್ಟನ್ನು ಮಾಡದಿದ್ದರೆ ಸಮಾರಾಧನೆಯ ಊಟ ರೈಸುವುದಿಲ್ಲ ನೋಡಿ ...."

ಸಂತೆಗೂ ಪಾಟಾಳಿ ಹೋಗಿ ಬರುತ್ತಾನೆ. ಸಮಾರಾಧನೆಯ ದಿವಸ ಮನೆಯ ಹೆಂಗಸರು ಏಳುವ ಮೊದಲೇ ಮನೆಗೆ ಬಂದು "ಅಮ್ಮ—ಇದು ಎಂಥ ನಿದ್ರೆ! ಬೆಳ್ಳಿ ಮೂಡಿಯಾಯಿತು. ಕಡಿಗೆ ಕೊಚ್ಚುವುದು ಬೇಡವೇ?"

ಎಂದು ಎಲ್ಲರನ್ನೂ ಕೂಗಿ, ಎಚ್ಚರಿಸಿ, ಕಡಿಗೆ ಸಿಪ್ಪೆ ಹಾರಿಸಿ, ಗೂಟಕೊಡೆದು ಕೊಚ್ಚಲಿಕ್ಕೆ ಕುಳಿತ ಎಂದರೆ - ಹೊತ್ತು ಜಾವವಾಗುವುದರೊಳಗೆ ತರಕಾರಿ ಎಂಬ ಬಾಬ್ತು ಎಲ್ಲವೂ ಕೊಚ್ಚಿ ಧ್ವಂಸವಾಗಬೇಕು. ಅದರ ಮೇಲೆ ನೀವಿಷ್ಟು ಕಾಫಿ ಕೊಟ್ಟರಂತು ಸರಿಯೆ. "ಕಾಫಿ ಗರಮ್; ಅವಲಕ್ಕಿ ನಾಜೂ.... ಆದರೆ ನೋಡಿ, ಹೊಟ್ಟೆಗೆ ಬೆಳಿಗ್ಗೆ ಇಷ್ಟು ಬೀಳದೆ ನಡೆಯಲಿಕ್ಕಿಲ್ಲ" ಎಂದು, ಕೊಟ್ಟದ್ದನ್ನು ಕುಡಿಯುತ್ತಾನೆ. ಅದಕ್ಕೆ ಅವಕಾಶವಾಗಲಿಲ್ಲವಾದರೆ? ಅವನಿಗೆ ಇಷ್ಟು ಹೆಸರು ಕಾಳು, ಬೆಲ್ಲ ಕೊಟ್ಟರೆ, ಅವನ್ನೇ ಕಡೆದು ಬೆಲ್ಲ ಹಾಕಿ ಕುಡಿಯುತ್ತಾನೆ. "ನನಗೆ ಹೆಸರು ನೀರು ಹಿಡಿದ ಹಾಗೆ ನಿಮ್ಮ ಕಾಫಿಯಲ್ಲ; ಕಷಾಯವಲ್ಲ; ಅದೊಂದೂ ಹಿಡಿಸುವುದಿಲ್ಲ" ಎಂದು ಒಂದೂವರೆ ಚೆಂಬು ಕುಡಿದಾನು. "ನಿಮ್ಮ ಕಡೆಯುವ ಕಲ್ಲಿಗೆ ತೆರವಿಲ್ಲವೋ? ಬೇಡ; ಒಂದು ಹಣ್ಣು ಸೌತೆ ಕೊಡಿ. ನೋಡುವ" ಎಂದು ಹೇಳಿ ಅದನ್ನು ಹೆರೆದು, ಬೆಲ್ಲಹಾಕಿ, ಹೊಟ್ಟೆ ತಂಪು ಮಾಡಿಕೊಳ್ಳುತ್ತಾನೆ.

ಮುಂದಿನ ಕೆಲಸ ಅಡುಗೆಯವರದ್ದಲ್ಲವೇ? ಪಾಟಾಳಿ ಮುಟ್ಟುವ ಕೆಲಸ ಅವನಲ್ಲ. ಆ ಬಳಿಕ ಹೊರಗೆ ಬಂದು ಸಮಾರಾಧನೆಗೆ ಬಂದವರೊಡನೆ ಹರಟುತ್ತಾ ಕುಳಿತಿರುತ್ತಾನೆ.

ನಿಮ್ಮ ಮನೆಯಲ್ಲಿ ಸಮಾರಾಧನೆಯ ಬದಲು, ಇವತ್ತು ರಾತ್ರಿ ಆಟವೋ? ಅಲ್ಲಿ ಪರಮನ ಓಡಾಟವೇ ಓಡಾಟ. ದೀವಟಿಗೆಯವರಿಂದ ಹಿಡಿದು ವೇಷದವರ ತನಕ ಅವನದ್ದೇ ಕಾರುಭಾರು. ಅದು ಯಾರು ಆಡಿಸುವ ಆಟವಾದರೂ ಸರಿಯೆ, ಪರಮಯ್ಯನಿಲ್ಲದೆ ಬೆಳಗಾಗದು. ಸಭೆಯ ಮುಂದೆ ಎಲೆ ಅಡಿಕೆ, ಹೊಗೆಸೊಪ್ಪು ತಪ್ಪುವಂತಿಲ್ಲ. ಹಾಗೆಂದು ಖಾತಿಪೋಲಿ ಮಕ್ಕಳು ಮರಿ ತಿಂದು ಹುಡಿಮಾಡದ ಹಾಗೆ ನಿಗಾ ಸಹ ಇದೆ....'ಯಾವ ಪ್ರಸಂಗ' ಎಂದು ನಿರ್ಣಯವಾಗದಿದ್ದರೆ ಅವನ ಗಡಿಬಿಡಿ ಹೇಳಿ ತೀರದು. ಆಟ ಆಡಿಸುವವರ ಬಾಯಿಂದ ಮಧ್ಯಾಹ್ನವೇ ಅದನ್ನು ತಿಳಿದು, ಸಂಜೆ "ಇವತ್ತು ನೋಡಿ ಬಭ್ರುವಾಹನ ಕಾಳಗ....ರಾಮನ ಅರ್ಜುನ, ನಾಗನ ಪ್ರಮೀಳೆ' ಎಂದು ಛಾಪೆ ಮಾಡಿಯೇ ಬರುತ್ತಾನೆ. ರಾತ್ರಿ ಆಟದ ಸಮಯ ಒಂದೇ ಒಂದು ವೇಷ ತಡವಾಗಕೂಡದು. ರಂಗಸ್ಥಳ ಒಂದು ನಿಮಿಷಕ್ಕೆ ಹಾಳುಬಿದ್ದಿತು ಎಂದರೆ ಅವನ ಹೊಟ್ಟೆಗೆ ಬೆಂಕಿ ಬಿದ್ದ ಹಾಗೆ ಅನಿಸುತ್ತದೆ. ಇಷ್ಟೆಲ್ಲ ಗದ್ದಲ ಮಾಡಿ ಅವನಿಗೆ ಕಾಣುವುದು ಎಂದರೆ ವೇಷದ ಮನೆ

ಯಿಂದ ರಂಗಸ್ಥಳದ ನಡುವಣ ಗದ್ದೆಗಳೇ. ಅಲ್ಲಿ ಬಿಸ್ತು ನಿದ್ರಿಸುವವರನ್ನು ಕಂಡು “ಅಯ್ಯೋ, ನಮ್ಮೂರವಕ್ಕೆ ಬುದ್ಧಿ ಎಳ್ಳಷ್ಟೂ ಇಲ್ಲ, ಉರಾಳರು ಇಷ್ಟು ದುಡ್ಡು ಸುರಿದು. ಆಟ ಆಡಿಸಿದರೆ ಇವಕ್ಕೆ ಕಾಣುವ ಯೋಗವನ್ನೂ ಬ್ರಹ್ಮ ಬರೆಯಬಾರದೇ? ಗದ್ದೆಯ ಧೂಳು ಬರೆಯಬೇಕೇ ಇವುಗಳ ಹಣೆಯಲ್ಲಿ?” ಎಂದುಬಿಡುತ್ತಾನೆ.

ಸಮಾರಾಧನೆಗಳಾದರೆ, ಆಟದ ಹಾಗೆ ಅವನ ಪಾಲಿಗೆ ವೃಥಾ ದುಡಿತವಿಲ್ಲ. ಊಟಕ್ಕೆ ಪಾಟಾಳಿಯನ್ನು ಕರೆದು ಮೂಲೆಯಲ್ಲಿ ಕೂಡ್ರಿಸುತ್ತಾರೆ. ಮೊದಲಿನ ಪಂಕ್ತಿಗೇನೆ ಅವನ ಊಟವಾಗುತ್ತದೆ. ಎದುರಿದ್ದವರೆಲ್ಲರೂ ‘ಹೂಂ ನೋಡುವುದೇನು! ಪಾಟಾಳಿಗೆ ನಾಲ್ಕು ಹೋಳಿಗೆ ಹಾಕಿ, ನೋಡುವ ....ಇನ್ನು ನಾಳೆ ರಾತ್ರೆ ಮಯ್ಯರಲ್ಲಿ ಆಟವಿದೆ...” ಎಂದು ಉಪಚರಿಸುತ್ತಾರೆ. ನೀವು ನಾಲ್ಕು ಹೋಳಿಗೆಯನ್ನಲ್ಲ, ಆರನ್ನು ಹಾಕಿಸಿದರೂ, ಊಟದಲ್ಲಿ ಅವನ ಕೋಲುಹೊಟ್ಟೆ ಹಿಂದಾದೀತು ಎಂದು ತಿಳಿಯಬೇಡಿ.

ಪರಮಯ್ಯನ ಜೀವನ ಚಿಂತಾರಹಿತವಾದದ್ದು ಎಂದು ಮಾತ್ರ ಊಹಿಸ ಬೇಡಿ. ಅವನಿಗೆ ಅವನ ಮನೆಯ ಚಿಂತೆಯಿಲ್ಲ. ಅವನೂ ಮನೆಯಲ್ಲಿರುವುದು ಹೊರಗೆ ಇಲ್ಲದಾಗ ಅಷ್ಟೆ. ಊರಿನ ಚಿಂತೆ ಪರಮಯ್ಯನಿಗಿದ್ದಷ್ಟು ಇನ್ನೊಬ್ಬರಿಗಿಲ್ಲ. ಉರಾಳರ ಮನೆಯ ಸಣ್ಣ ಹುಡಗನಿಗೆ ಶೀತ, ಎಂದು ಕೆಮ್ಮಿನಿಂದಲೇ ಅವನಿಗೆ ತಿಳಿದರೆ, ಎಂಟು ದಿನದ ತನಕವೂ ಕಂಡವರೊಡನೆ ಆತ “ಪಾಪ—ಉರಾಳರ ಸಣ್ಮಗು ಬಾಬುಗೆ ಕುದಿಯುವಂಥ ಜ್ವರ; ಕಟ್ಟಲಾರದ ಶೀತ” ಎಂದು ಹೇಳಿ ಮರುಕತೋರಿಸುತ್ತಾನೆ. ಯಾವನದ್ದಾದರೂ ಗುಡಿಸಲು ಅಕಸ್ಮಾತ್ ಸುಟ್ಟುಹೋಯಿತಾದರೆ-ಮರುದಿವಸವೇ ಪ್ರತಿ ಮನೆಗೂ ಹೋಗಿ, “ಪಾಪ, ಹೀಗಾಯಿತು ಆಚಾರಿ ಲಿಂಗನಿಗೆ....ಎಲ್ಲ ಇದ್ದುದು ಬಿದ್ದುದು ಅಗ್ನಿಗೆ ಆಹುತಿ ಆಯಿತು” ಎಂದು ಪ್ರಾಣ ಇರುವವರಲ್ಲಿ ಮರುಕ ಹುಟ್ಟಿಸುತ್ತಾನೆ. ನಾಳೆ ಆಚಾರಿ ಲಿಂಗನು ಬೇಡಲಿಕ್ಕೆ ಹೋದರೆ ‘ನಾಸ್ತಿ’ ಅನ್ನುವವರಿರಬಾರದು. ಇನ್ನು ಯಾರದ್ದಾದರೂ ಆಸ್ತಿ ಯಾರಿಗಾದರೂ ಆದರೆ, ಎಲ್ಲಾದರೂ ಯಾರಾದರೂ ಮೆಜಿಸ್ಟ್ರೇಟರಲ್ಲಿ ಫಿರ್ಯಾದಿಗಿರ್ಯಾದಿ ಒಯ್ದರೆ, ಪರಮಯ್ಯನ ತಳಮಳ ಹೇಳಬೇಡಿ, ‘ಸಾಹುಕಾರರೇ ....ಆ ಹುಡುಗನಿಗೆ ಈ ಕೆಲಸ ಬೇಡವಿತ್ತು. ಅವರಾದರೂ ನಾಲ್ಕು ದಿವಸ ಅವನನ್ನು ತಡೆಯಬಹುದಿತ್ತು. ನಾಲ್ಕು ಜನರಿಂದ ಹೇಳಿಸಬಹುದಿತ್ತು.

ಮೆಜಿಸ್ಟ್ರೇಟರು—ಗೀಟರು ಎಂದು ಫಿರ್ಯಾದಿ ಮಾಡಿದರೆ, ಊರಲ್ಲಿ ನಾಲ್ಕು ಜನರು ಇದ್ದ ಹಾಗಾಯಿತೇ, ಸತ್ತಹಾಗಾಯಿತೇ?" ಎನ್ನುತ್ತಾನೆ.

ಇನ್ನು ಅವನಿಗೆ ಬೇಕದವರಲ್ಲಿಯ ಅಂದರೆ ಸೀತ್ರೈತಾಳರೊಳಗೂ ಸೇರೆಗಾರ ಶೀನಪ್ಪನೊಳಗೂ ಕಕ್ಷಿ ಬಂದರೆ, ಆತನ ಕೈಕಾಲನ್ನು ಕಡಿದು ಇಬ್ಬರಿಗೂ ಹಂಚಿ ಕೊಟ್ಟಹಾಗೆಯೇ ಸರಿ. ಇಬ್ಬರ ಹತ್ತಿರವೂ ದಿವಸಕ್ಕೆ ನಾಲ್ಕು ಸಾರಿ ಹೋಗಿ ಬರುತ್ತ: "ಏನಾಯಿತು, ಏನಾಯಿತು? ಯಾಕೆ ರಾಜಿಯಾಗಬಾರದು? ಇದೆಲ್ಲ ಏನು ಶಾಶ್ವತ?" ಎಂದು ಕೇಳಿದ ಇಬ್ಬರಿಗೂ ಹೇಳುತ್ತಾನೆ. ಆದರೆ ಸೀತ ಸುರಿತ ಐತಾಳರ ಹಾಗಿನವರಾಗಲಿ, ನಾಗಯ್ಯ ಶೆಟ್ಟರ ಹಾಗಿನವರಾಗಲಿ ಪಾಟಾಳಿ ಮಾಣಿಯ ಮಾತಿಗೆ ಕಿವಿಗೊಟ್ಟಾರೇ? "ಪರಮು ನಿನಗೆ ಮರುಳು, ನಿನಗೆ ವರ್ಷ ಇಷ್ಟು ಆದದ್ದು ನಾಯಿಗೆ ಆದ ಹಾಗೆ. ಈ ಜನರ ಹಣೆಯ ಬರಹ ನಿನಗೆ ಗೊತ್ತಿಲ್ಲ. ಇವೆಲ್ಲ ಬಿಸಿಯಾಗದೆ ಬೆಣ್ಣೆ ಕರಗದ ಮಾಲುಗಳು" ಎಂದು ಬಿಡುತ್ತಾರೆ ಅವರು.

ಪರಮಯ್ಯ ಸಣ್ಣಗಾಗಿ, ತಣ್ಣಗಾಗಿ "ಏನು ಬಿಸಿಯೋ, ಏನು ಕರಗುವುದೋ?" ಎನ್ನುತ್ತಾನೆ. "ಹಿಂದೆಲ್ಲಾ ಈ ಊರಲ್ಲಿ ಮನುಷ್ಯರಿರಲಿಲ್ಲವೇ ....ಎಲ್ಲರೂ ಮೆಜಿಸ್ಟ್ರೇಟರು ಮುನಿಸೀಫರನ್ನು ಕಂಡೇ ನ್ಯಾಯ ಮಾಡಿದವರೇ ...? ಹೂಂ, ನನಗ್ಯಾಕೆ—ಕಾಲಗತಿ ಏನೇನೆಲ್ಲಾ ಮಾಡಿಸುತ್ತದೆಯೋ! ಮುಖ್ಯ ಆ ಮಾಲಿಂಗೇಶ್ವರನಿಗೆ ಇದೆಲ್ಲಾ ಚೇಷ್ಟೆಯನ್ನು ನೋಡಬೇಕೆಂದಿರಬೇಕು" ಹೀಗೆಂದು ಸಮಾಧಾನವನ್ನು ತಂದುಕೊಳ್ಳುತ್ತಾನೆ. ಇಷ್ಟಾದರೂ, ಪರಮಯ್ಯ ಊರಿನ ಯಾರಿಗೂ ಬೇಡ ಅನಿಸಿದವನಲ್ಲ.



# ೮ ಅಕ್ಕಣಿ ಹೆಂಗಸು

'ಅಕ್ಕಣಿ' ಎಂದರೆ ಸಾಲದೇ? ಜತೆಯಲ್ಲಿ 'ಹೆಂಗಸು' ಎನ್ನಬೇಕೇ ಎಂಬ ವಿಷಯವಾದ ಆಕ್ಷೇಪಣೆ ಬಂದೀತು. 'ಅಕ್ಕಣಿ' ಎಂಬುದು ಅವಳ ನಾಮಧೇಯ. ನಮ್ಮೂರಿನಲ್ಲಿ ಸಾಕಷ್ಟು ಪ್ರಸಿದ್ಧಿಗೆ ಬಂದವಳು ಅವಳು. ಮೂರು ತಲೆಗಳಿಂದ ಅವಳ ಮನೆಯವರ ಪ್ರಸಿದ್ಧಿಯುಂಟು. ಅಕ್ಕಣಿಯು ಯೌವನಕ್ಕೆ ಕಾಲಿರಿಸಿದಾಗ ಹೆಸರಾಗಿದ್ದಳು. ತುಂಬಿದ ಯೌವನೆಯಾದಾಗ ಹೇಗೂ ಮೆರೆದಳು. ಈಗ ಮುಪ್ಪು ಬಂದರೂ ಅವಳ ಕೀರ್ತಿಗೆ ಮುಪ್ಪು ಬಂದಿಲ್ಲ. ಬರಿಯ ಊರು ಒಂದರಲ್ಲೇ ಅವಳ ಖ್ಯಾತಿಯಲ್ಲ; 'ಕೋರ್ಟು, ಮನೆ' ಎರಡರಲ್ಲೂ ಹೆಸರಾದವಳು. ಕ್ರಿಮಿನಲ್ ಕೋರ್ಟಿನ ಹಲವು ಮೊಕದ್ದಮೆಗಳಲ್ಲಿ ಅವಳ ಹೆಸರು ಬಂದಿದೆ. ಆದರೆ ಅವಳು ಮುದ್ದೈಯಾಗಿ, ಇಲ್ಲವೇ ಮುದ್ದೈಯಾಲೆಯಾಗಿ, ಎರಡೂ ವಿಧದಿಂದಲೂ ಮೆಜಿಸ್ಟ್ರೇಟರ ಮುಂದೆ ಹೋದವಳಲ್ಲ. ಆದರೂ ಕೋರ್ಟಿನಲ್ಲಿ ದಾಖಲಾದ ಹಲವು ರಿಕಾರ್ಡುಗಳಲ್ಲಿ, ವಾಗ್ಮೂಲಗಳಲ್ಲಿ ಅಕ್ಕಣಿ ಹೆಂಗಸು ಅಂಕಿತಳಾಗಿದ್ದಾಳೆ. ಪ್ರಾಯಶಃ ಹೆಂಗಸು ಎಂಬ ವಿಶೇಷಣ ಸೇರಿಸದಿದ್ದರೆ, ಮೆಜಿಸ್ಟ್ರೇಟರು ಸಹ ಹೆದರುವಂತಿದೆಯೋ ಏನೋ.

ಕೋರ್ಟಿನಲ್ಲಿ ಅಕ್ಕಣಿ ಕಾಣಿಸಿಕೊಳ್ಳಲೇಬೇಕಾದ ಕೆಲವು ಪ್ರಸಂಗಗಳಿದ್ದುವು. ವಕೀಲರುಗಳು "ಅವಳನ್ನು ಕರೆಯಿಸಿರಿ. ಅವಳು ಮುಖ್ಯ ಬೇಕಾದ ಸಾಕ್ಷಿ. ಅವಳು ಬಂದರೆ ಎಲ್ಲಾ ಸರಿಯಾಗುತ್ತದೆ" ಎಂದುದುಂಟು. "ಅಕ್ಕಣಿಯನ್ನು ಪಂಜರ ಹೊಗಿಸಿಯೇ ಬಿಡುತ್ತೇವೆ" ಎಂದ ಭಟರುಂಟು. ಇದೇನು ಸಾಮಾನ್ಯರ ಮಾತುಗಳಲ್ಲ. ಮೊನ್ನೆ ಮೊನ್ನೆ ನಾಗಯ್ಯ ಸೆಟ್ಟರಿಗೂ ನೀಲಪ್ಪ ಹೆಗ್ಗಡೆಯವರಿಗೂ ಆದ ಕಕ್ಷಿಯಲ್ಲಿ ಹೀಗಾಗಿತ್ತು. ಶೇಕು ಬ್ಯಾರಿಗೂ ನೀಲಪ್ಪ ಹೆಗ್ಗಡೆಯವರಿಗೂ ಆದ ಮಾರಾಮಾರಿಯಲ್ಲಿ ಅಕ್ಕಣಿ ಮುಖ್ಯಳೆನಿಸಿದ್ದಳು. ನರಸ ಉಪಾಧ್ಯಾಯರಿಗೂ ಜನ್ನಪ್ಪಯ್ಯನಿಗೂ ನಡೆದ ಖಾಡಾಖಾಡಿಯಲ್ಲಿ ಅಕ್ಕಣಿ ಅವಶ್ಯವಾಗಿದ್ದಳು. 'ಅವಳನ್ನು ಕರೆಸಿಯೇ ಶುದ್ಧ; ಕರೆಸುತ್ತೇವೆ; ಕರೆಸುವ; ಕರೆಸಿದರಾಯಿತಲ್ಲ' ಎಂದು, ಕೊನೆಗೂ ದಮ್ಮು ನಿಲ್ಲಿಸಿ ತಣ್ಣಗಾದವರೇ ಎಲ್ಲರು.

ಏನು ವಿಷಯ ಎಂದು ಕೇಳುತ್ತೀರೋ—ಪಾಟಾಳಿ ಪರಮಯ್ಯನನ್ನು ಕೇಳಿರಿ. ಅವನು ಹೇಳುತ್ತಾನಲ್ಲ ...ಸ್ಪಷ್ಟವಾಗಿ "ಅಕ್ಕಣಿಯನ್ನು ಕರೆಯಿಸು ತ್ತಾರಂತೇನು? ಅವಳನ್ನು ಸಾಕ್ಷಿಗೆ ಒಮ್ಮೆ ಕರೆಯಿಸಲಪ್ಪ. ಹಾಗೇನಾದರೂ ಆದರೆ ನಮ್ಮೂರಿನ ಬಂಟರು, ಬ್ರಾಹ್ಮಣರು ಯಾರೂ ಮುಂದಕ್ಕೆ ಕೋರ್ಟಿನ ಮೆಟ್ಟಿಲನ್ನು ಏರಲಿಕ್ಕಿಲ್ಲ. ಅವರ ಜಾತಕ ಅಷ್ಟು ಸ್ಫುಟವಾದೀತು."

ನೀವು ವಾದಿಸಿ: "ಪರಮು, ಹೀಗೇನು ಹೇಳುತ್ತೀ; ಅಕ್ಕಣಿಗೆ ಅವರ ತಲೆಬುಡವೆಲ್ಲ ತಿಳಿದಿದೆ. ಚನ್ನಪ್ಪ ಮಯ್ಯರು ನರಸ ಉಪಾಧ್ಯಾಯರ ಒಕ್ಕಲಿನ ಕಾಲು ಕಡಿಸಿದ್ದು ಏಕೆಂದು ಅವಳಿಗೆ ಗೊತ್ತು. ಗೊತ್ತು ಎಂದರೇನು! ಅವಳೇ ಹೇಳಿಸಿ ಆದದ್ದು ಅನ್ನುತ್ತಾರೆ. ಅದೆಷ್ಟು ಸತ್ಯವೋ ನನಗೆ ತಿಳಿಯದು; ಆದರೆ ಅಷ್ಟಾಗುವಾಗ ಅಕ್ಕಣಿ ಪಿಳಿಪಿಳಿ ನೋಡಿ ನಗುತ್ತಿದ್ದಳು ಎಂಬುದು ಖಂಡಿತ". ಹೀಗಂದರೆ ಪರಮಯ್ಯ ಥಟ್ಟನೆ: ಅಂದೇ ಬಿಡುತ್ತಾನೆ "ನಿಜ; ಎಲ್ಲ ನಿಜ. ಅವಳಿಗೆ ಅಷ್ಟೇ ಅಲ್ಲ, ಇನ್ನೂ ನೂರು ಸಂಗತಿಗಳು ತಿಳಿದಿವೆ. ಅವಳಿಗೆ ತಿಳಿದದ್ದು ನಮಗೆ ನಿಮಗೆ ಯಾರಿಗೂ ತಿಳಿದಿರದು. ಅವಳು ಈ ವಯಸ್ಸಿನಲ್ಲಿ ಕೋರ್ಟು ಏರಳು. ಮೊದಲೂ ಏರಿದವಳಲ್ಲ. ಹಟ ಹಿಡಿದು ಯಾರಾದರೂ ಕೋರ್ಟಿಗೆ ಎಳೆದರೆ– ಎಲ್ಲವರ ಗುಟ್ಟೂ ಅಲ್ಲಿ ಬಯಲಾದೀತು. ಅಕ್ಕಣಿ ಬಾಯಿ ತೆರೆಯುವುದೊಂದೇ ಬಾಕಿ, ಗಡಿಯಾರಕ್ಕೆ ಕೀಲಿ ಕೊಟ್ಟ ಹಾಗೆ. ಮತ್ತೆ ಮೆಜಿಸ್ಟ್ರೇಟರಲ್ಲ, ಅವರ ತಾತ ಬಂದರೂ ನಿಲ್ಲಿಸಲಿಕ್ಕೆ ಬರಲಿಕ್ಕಿಲ್ಲ. ಆ ಸಮಯದಲ್ಲಿ ಏನು ಅಂದಾಳು, ಏನು ಅನ್ನಲಿಕ್ಕಿಲ್ಲ-ಎನ್ನುವುದು ಕಷ್ಟ. ಅವಳ ಸಾಕ್ಷಿಯಿಂದ ಯಾರಿಗೆ ಗಸಿ ಬಂದರೂ ಬಂತೇ!"

ಇಲ್ಲಿ ಪಾಟಾಳಿಯ ಮಾತೇ ಸತ್ಯ; ಪರಮನಿಗೆ ಅಕ್ಕಣಿಯ ಮೇಲೂ ಸಿಟ್ಟಿಲ್ಲ, ಉಳಿದ ಯಾರ್‍ಯಾರ ಮೇಲೆಯೂ ದ್ವೇಷವಿಲ್ಲ. ಅಕ್ಕಣಿಯ ವಿಷಯ ಅವನಿಗೆ ತಿಳಿದಷ್ಟು ಇನ್ನಾರಿಗೂ ತಿಳಿಯದು. ಕಾರಣ–ನಮ್ಮ ನರಸ ಐತಾಳರ ಅಜ್ಜ, ಅವರು ಈಗ ಇಲ್ಲ, ಅವರಿದ್ದಾಗ ಊರಿನ ಮೊದಲಿನ ಗುರಿಕಾರರು ಎಣಿಸಿದ ಭಟರು- ಆಗ ಪರಮನಿಗೆ ೨೦ ವಯಸ್ಸು! ಅವರು ಅಕ್ಕಣಿಗೆ ಬಲಿಬಿದ್ದಾಗ, ಪರಮನೇ ಖುದ್ದಾಗಿ "ಬೇಡ ಸ್ವಾಮಿ; ತಮ್ಮಂಥವರಿಗೆ ಬೇಡದ ವ್ಯಾಪಾರ" ಎಂದು ಸಾಲ್ಕು ಬುದ್ಧಿಮಾತು ಹೇಳಿದ ಧೀರ. ಆದರೆ ಅವರೇ ಹಟ ಹಿಡಿದರು. ಬಾರ್ಕೂರಿನಿಂದ ಅಕ್ಕಣಿಯನ್ನು ನಮ್ಮೂರಿಗೆ ಕರೆಯಿಸಿ ಶೋಭನ ಮಾಡಿಸಿ, ಮನೆ ಕಟ್ಟಿಸಿ ಕೊಟ್ಟರು. 'ಗಂಡು ತಾನು'

ಎಂದು. ಅವರೇನೆ ಹೇಳುವಂತೆ, ಹೆಸರನ್ನು ಪಡೆದರು. ಅನಂತರ ಪರವೂ, ನರಸ ಐತಾಳರ ತೈನಾತಿಯಾದಂತೆ, ಅಕ್ಕಣಿಯ ಮನೆಗೂ ಹೋಗಿ ಬರ ಬೇಕಾಯಿತು. 'ಅಕ್ಕಣಿಯು ಐತಾಳರ 'ಆಸಾಮಿ' ಎಂದ ಮೇಲೆ ಸ್ವತೇವ ಊರಿನಲ್ಲೇ ಒಂದು ಭಗಾಮಿನ ಜನವೆನಿಸಿದಳು.

ನಮ್ಮ ಊರಿನ ಸಾಮಾನ್ಯರು ಅವಳನ್ನು ಕಂಡರೆ, ಬೆನ್ನಾರೆ ಬೈದರೂ, ಎದುರಿನಲ್ಲಿ 'ನೀವು; ಅಕ್ಕಣಿಯಮ್ಮ' ಎನ್ನುತ್ತಿದ್ದ ಕಾಲವದು. ನರಸ ಐತಾ ಳರ ಹಿರೇ ಮಗಳ ಲಗ್ನದ ಸಮಯ ಅಕ್ಕಣಿಯೇ ಚಪ್ಪರದ ಯಜಮಾನಿ ಯಾಗಿದ್ದಳು ಎಂದರೂ ತಪ್ಪಿಲ್ಲ. ಅಕ್ಕಣಿಗೆ ಆಗ ಹತ್ತು ವರ್ಷದ ಮಗಳಿ ದ್ದಳು. ಸರಸಿ ಎಂದು ಹೆಸರು. ಅವಳು ಅದೇ ದಿವಸ ಗೆಜ್ಜೆ ಕಟ್ಟಿ ಬಂದ ಬೀಗರಿಗೆ 'ದಾಲಚ್ಛಾದ' ಮಾಡಿ, ಜನರ ಬಾಯಿಂದ "ಹೌದು ಆಕ್ಕಣಮ್ಮ- ನಿನ್ನ ಮಗಳು ನಿನ್ನ ಹೆಸರನ್ನು ಮೀರಿಸುತ್ತಾಳೆ" ಎನ್ನಿಸುತ್ತಿದ್ದಳು.

ಆ ದಿನ ಕಳೆಯಿತು. ನರಸ ಐತಾಳರು ಕೂದಲು ನೆರೆಯುವುದರೊಳಗೆ ಕೈಲಾಸವನ್ನು ಕಂಡರು. ಅಷ್ಟರೊಳಗೇನೇ ಸರಸಿಯೂ, ಹದಿನಾರರಲ್ಲಿ ಒಂದು ಹೆಣ್ಣು ಕೂಸನ್ನು ಹೆತ್ತು ತೀರಿಕೊಂಡಳು. ಅಕ್ಕಣಿಯ ಈ ಮೊಮ್ಮಗಳು, ಒಂದು ರೀತಿಯಿಂದ ಅನಾಥಳಾದಳು.

ಅಕ್ಕಣಿಗೆ ಏನಾದರೂ ೩೫ರ ಸರಿಸುಮಾರು ವಯಸ್ಸು. ಆದರೂ ಆಗಿನ ದಿವಸದಲ್ಲಿ, ಅಂದರೆ ಸುಮಾರು ಹದಿನಾರು ವರ್ಷಗಳ ಹಿಂದೆ, ಸೀತ್ಯೈತಾಳ ರಿಂದ ಹಿಡಿದು ಅಚ್ಚಣ್ಣ ಭಂಡಾರಿಗಳ ತನಕ, ಎಲ್ಲರೂ ಅವಳ ನಗುವಿಗಾಗಿ ಹಾರೈಸಿದ್ದರು. ಆದರೆ ಅವಳು ಮಾತ್ರ ಮೂರು ವರ್ಷ ಕಾಲ ವ್ರತವೋ ಎಂಬ ಹಾಗೆ, ಮನೆಯಿಂದ ಹೊರಕ್ಕೆ ಕಾಲು ಇರಿಸಲಿಲ್ಲವೆನ್ನಿ. ಸತ್ತವರ ಶಾಸನದಂತೆ ಆವಳ ಮನೆಯ ಖರ್ಚಿನ ಮಟ್ಟಿಗೆ ಅಕ್ಕಿ ಬರುತ್ತಲಿತ್ತು. ಅವಳು ವಾಸವಾಗಿದ್ದ ಮನೆಯೂ ಅವಳ ಹೆಸರಲ್ಲೇ ಇದ್ದಿತ್ತು.

ಅನಂತರ ನರಸ ಐತಾಳರ ಮಗ ರಮಣಯ್ಯ ಪ್ರಾಯಕ್ಕೆ ಬಂದದ್ದಾ ಯಿತು. ಆಚೀಚಿನವರ ಮಾತನ್ನು ಕೇಳಿ ಧೈರ್ಯ ತಾಳಿ ಅಕ್ಕಣಿಯ ಪೆನ್ಶನ್ ನಿಲ್ಲಿಸಿಬಿಟ್ಟ. ನರಸ ಐತಾಳರ ಮೇಲಿನ ಪ್ರೀತಿಯಿಂದ "ರಮಣನನ್ನು ಮಾಫಿ ಮಾಡಿದ್ದೇನೆ" ಎಂದು ಆಕೆ ಮೌನತಾಳಿದಳು. ಅವಳ ಮೊಮ್ಮಗಳು ಪುಟ್ಟ ರಂಗಿಗೆ ಈಗ ಐದು ವರ್ಷ. "ಇನ್ನೊಂದು ಎಂಟು ವರ್ಷ ಕಳೆದರೆ ಈ ನಾಯಿಗಳಿಗೆ ಹೆದರಬೇಕಲ್ಲ" ಎಂದು ಧೈರ್ಯವಾಗಿದ್ದವಳು, ಕೊನೆಸಾಗದೆ.

ಪರಮಯ್ಯನನ್ನು ಕರೆಯಿಸಿ "ನಾನು ರಮಣನಿಗೆ ತಾಯಿಗೆ ಸಮಾನ. ಸತ್ತವರ ಮಾತನ್ನು ಪುಟ್ಟರಂಗಿ ಪ್ರಾಯಕ್ಕೆ ಬರುವ ತನಕವಾದರೂ ನಡೆಯಿಸಲಿ" ಎಂದು ಹೇಳಿ ಕಳುಹಿಸಿದಳು. ಪಾಪದ ಪರಮಯ್ಯನಿಗೆ ಮಂಗಳಾರತಿಯಾಯಿತು. "ನೀನೂ, ಆವಳೂ ಸೇರಿ ಅಪ್ಪಯ್ಯನನ್ನು ಲಗಾಡಿ ತೆಗೆದದ್ದು ಸಾಕು" ಎಂದು ಆ ಮಗನಿಂದ ಉತ್ತರ ಬಂದಿತು.

ಪರಮನಿಗೆ ಆದ ಅಪಮಾನವು ತನಗಾದಂತೆಯೇ ಎಂದು ಅಕ್ಕಣಿ ತಿಳಿದುಕೊಂಡು ಸುಮ್ಮನಾದಳು. ತನ್ನ ಹೊಟ್ಟೆಯ ಪಾಡಿಗಾಗಿ 'ಸೀತ್ತೈತಾಳರೋ, ಅಚ್ಚಣ್ಣ ಭಂಡಾರಿಗಳೋ' ಎಂದು ಅಳುಕುವ ಕಾಲ ಬಂದಿತು. "ಸೆಟ್ಟರಿಗಿಂತ ಬ್ರಾಂಬರು ಮೇಲು "ಎಂಬುದು ಅವಳ ಒಂದು ಯೋಚನೆ. ಆದರೆ ಸೀತ್ತೈತಾಳರನ್ನು ನಂಬಿದರೆ 'ವೈದಿಕ ಬ್ರಾಹ್ಮಣ, ತನಗೂ ಅರೆಹೊಟ್ಟೆ; ನಂಬಿದವರಿಗೂ ಬರಿ ಹೊಟ್ಟೆ', ಹೀಗೆಂದು ಯೋಚಿಸಿ ತನ್ನ ಒಲವನ್ನು ಭಂಡಾರಿಗಳ ಕಡೆಗೆ ಎಸೆದಳು.

ಅಚ್ಚಣ್ಣ ಭಂಡಾರಿಗಳು ಅಕ್ಕಣಿಯ ಮನೆಗೆ ಹೋಗುತ್ತಿದ್ದಾರೆ ಎಂಬ ಸುದ್ದಿ ಹೊರಟ ಮೊದಲ ದಿವಸ 'ಅಬ್ಬಾ ಅದೃಷ್ಟವೇ! ತಿರುಕನೋರ್ವ ಎಂಬ ಹಾಡಿನ ಹಾಗೆ ಪಟ್ಟದ ಆನೆ ಭಂಡಾರಿಗಳ ಕೊರಳಿಗೆ ಹಾರ ಹಾಕಿತೇ' ಎಂಬ ಕೋಲಾಹಲವನ್ನು ಹುಟ್ಟಿಸಿಬಿಟ್ಟಿತ್ತು. ಅಂದಿನಿಂದ ಒಳಗೊಳಗೇನೇ ಭಂಡಾರಿಗಳ ಪಂಗಡ ಒಂದು, ಐತಾಳರ ಪಂಗಡ ಒಂದು ಎಂದಾಯಿತು.

ಅವರವರು ಸಮನಾದ ರಣಾಗ್ರಕ್ಕೆ ಇಳಿದದ್ದು ಮೊನ್ನೆ ಮೊನ್ನೆಯಾದರೂ, 'ಕಿರುಕುಳ', 'ತಳ್ಳಿ ಅರ್ಜಿ', 'ಮತ್ತೊಂದು, ಮಗದೊಂದು' ಎಂದು ಆ ದಿನದಿಂದಲೇ ತೊಡಗಿದರು. ಅಂದರೆ ಒಂದು ಮಾತು ನಿಜ-ಸೀತ್ತೈತಾಳರೂ ಗಂಡಸು; ಸೇಕಡ ನೂರಕ್ಕೆ ನೂರು ಗಂಡಸು. ಹೀಗಿದ್ದು ಭಂಡಾರಿಗಳಿಂದಾದ ಅಪಮಾನ ಸಹಿಸಿಯಾರೇ? ಮಾನ ಗಳಿಸುವ ಅಂದರೆ, ಕಾಸಿಲ್ಲದೆ ಅದು ಬರುವಂತಿಲ್ಲ. ಅವರ ಹತ್ತಿರ ಅಕ್ಕಣಿಗೆ ಧಾರೆಯೆರೆಯುವಷ್ಟು ಹಣವೂ ಇಲ್ಲ; ಎದುರಿಂದಲೇ ಕಾದಾಡಲು ಬೇಕಾಗುವ ಅನುಕೂಲತೆಯೂ ಇಲ್ಲ. ಹೀಗಾಗಿ ಅಚ್ಚಣ್ಣ ಭಂಡಾರಿಗಳ ಉಡಾಫಿ, ಆರೋಪಗಳಿಗೆ 'ಬೆಂಗಡೆಯಿಂದಲೇ ಮದ್ದು ಅರೆದರಾಯಿತಲ್ಲ' ಎಂಬ ಹಟ ಅವರದ್ದು.

"ಕಾಲಗತಿ ಚೆನ್ನಾಗಿಲ್ಲ. ಅಕ್ಕಣಿಯ ಅದೃಷ್ಟವೂ ಹಾಗೆ" ಅನ್ನುತ್ತಾನೆ ಪರಮಯ್ಯ. ಈಗ ಅಚ್ಚಣ್ಣ ಭಂಡಾರಿಗಳೂ ತೀರಿಕೊಂಡರು. ನಾಲ್ಕಾರು

ವರ್ಷಗಳ ಅವರ ಗೆಳೆತನದಿಂದ, ಮೂರು ನಾಲ್ಕು ಸಾವಿರ ರೂಪಾಯಿಗಳಷ್ಟು ನಗದು, ನಗನಾಣ್ಯ ಅವಳಿಗೆ ದೊರೆಯಿತು. ಮನೆವಾರ್ತೆಯನ್ನು ಅವರೇ ನಡೆಯಿಸಿಕೊಂಡು ಹೋಗುತ್ತಿದ್ದರು. ಈಗ ಮೊಮ್ಮಗಳಿಗೆ ಚತುರ್ದಶಿ, ನಾಳೆ ತುಂಬಿದರೆ ಹುಣ್ಣಿಮೆ. ಇಷ್ಟರಲ್ಲೇ ನೆರೆಯಬೇಕಿತ್ತು. ಇಂದು ನಾಳೆ ನೆರೆದಾಳು ಎಂಬ ಭರವಸೆ ಅವಳಿಗಿದೆ. ಅಕ್ಕಣಿಯ ಹೆಮ್ಮೆ ಮೊಮ್ಮಗಳ ವಿಷಯದಲ್ಲಿ ಅಷ್ಟಿಷ್ಟಲ್ಲ. 'ಬಾಳಕೂರಿಂದ ಹಿಡಿದು ಮಂಕಿ, ಮುರಡೇಶ್ವರಗಳ ತನಕ ಹುಡುಕಿದರೂ ನಮ್ಮ ಪುಟ್ಟರಂಗಿಯಂಥ ಹೆಣ್ಣನ್ನು ತಂದು ತೋರಿಸಲಿ' ಎಂಬ ಶಿಫಾರಸಿನ ಮಾತು ಅವಳ ಬಾಯಿಂದ ಬರುವುದುಂಟು, ಸ್ವಾಭಾವಿಕವೇ! ಪುಟ್ಟರಂಗಿಯ ಪ್ರಾಯ, ಚೆಲುವು ಎರಡೂ ಅವಳ ಪಾಲಿಗೆ ಬ್ಯಾಂಕಿನಲ್ಲಿ ಇಡಿಸಿದ ಡಿಪಾಜಿಟ್ಟು.

ಮೊಮ್ಮಗಳಿಗೆ ಪ್ರಾಯ ಬಂದರೆ, ಅಜ್ಜಿಯ ಮುಪ್ಪು ತಪ್ಪಿತೇ? ಅದು ಇದ್ದದ್ದುಂಟು. ಅವಳಿಗೆ ಮುಪ್ಪು ಬಂದರೂ ಅವಳ ಬಾಯಿಗೆ ಮುಪ್ಪು ಎಂದೂ ಬರಲಾರದು. ಅವಳಿಗೆ ತಿಳಿಯದಿರುವ ಸಂಗತಿಯಿಲ್ಲ; ಬೇಡವಾದ ವಿಷಯವಿಲ್ಲ. ಸಾಲದ್ದಕ್ಕೆ ಕೆಸವೆಯನ್ನು ತಿಂದಂಥ ಬಾಯಿ; ಆ ಬಾಯಿಗೆ ಬೀಗವೂ ಇಲ್ಲ.

ಅಕ್ಕಣಿಯು ಗಜೇಟಿಗೆ ಬೀಳದ ಸುದ್ದಿಯಿಲ್ಲ; ಬೆಳಿಗ್ಗೆ ಸಿಕ್ಕಿದ ಸುದ್ದಿ ಸಂಜೆಯೊಳಗೆ ಊರಿನ ಕಂಬಗಳಿಗೆಲ್ಲ ತಿಳಿದಿರುವಷ್ಟು ಚೆನ್ನಾಗಿ ಹರಡುವ ಯೋಗ್ಯತೆಯೂ ಇದೆ.' ಏನು ಸುದ್ದಿಯನ್ನು ಕೇಳಿದರೂ ಅವಳ ಬಾಯಿಂದಲೇ ಕೇಳಿದರೆ ಚಂದ' ಎನ್ನುವವರೂ ಇದ್ದಾರೆ. ಉಪ್ಪುಕಾರ, ಒಗ್ಗರಣೆ ಸಮೇತವಾಗಿ ಸುದ್ದಿ ಸಾರುವ ಬಾಯಿ ಇರುವಾಗ ಯಾವ ರಸಿಕ ಕಿವಿಡೂಗಲಿಕ್ಕಿಲ್ಲ! ಅಲ್ಲದೆ ಈ ಹೊತ್ತು ಅಕ್ಕಣಿ ಒಲಿದರೆ. ನಾಳೆ ಪುಟ್ಟರಂಗಿ ತಮ್ಮ ನಸೀಬಿಗೆ ಎಟುಕಬಾರದೇಕೆ ಎಂಬ ಆಸೆಯೂ ಇದ್ದೇ ಇದೆ.

ಜನರು ಹಾಗೆ ಬಾಯಿ ತೆರೆದಿರುವಾಗಲೇ-ಯಾವುದಾದರೂ ಸುದ್ದಿಗಳ ನಡುವೆ ವರ್ತಮಾನ ಪತ್ರಿಕೆಯವರು 'ಸ್ವಕೀಯ ವಾರ್ತೆ' ಎಂದು ಹೇಳುವ ಹಾಗೆ 'ನಮ್ಮ ಪುಟ್ಟರಂಗಿ'ಯ ವಿಚಾರ ತಪ್ಪದೆ ಬರುತ್ತದೆ. 'ನಮ್ಮ ಪುಟ್ಟರಂಗಿಗೆ ಮೊನ್ನೆ ಕುದಿಯುವಂತಹ ಜ್ವರ; ಮೈಮೇಲೆ ಬತ್ತ ಎಸೆದರೆ ಅರಳು ಆದೀತು.' 'ನಮ್ಮ ಪುಟ್ಟರಂಗಿಯನ್ನು ಉಡುಪಿಯಿಂದ ಕೇಳಿಬಂದಿದ್ದಾರೆ. ಬಳ್ಳಾಲರ ಮನೆ ಹುಡುಗ; ಪ್ರಸ್ತದ ಖರ್ಚಿಗೆ ೩,೦೦೦ ಕೊಡುತ್ತಾನಂತೆ.

ಅಲ್ಲದೆ-ತಿಂದು ಬಿಟ್ಟಷ್ಟು ಆಸ್ತಿ ಪಾಸ್ತಿ ಇದೆ.' 'ನಿನ್ನೆ ಗಂಗೊಳ್ಳಿ ರಾಮಯ್ಯ ನಾಯ್ಕರ ಮನೆಗೆ ಜನ ಕಳುಹಿಸಿದ್ದರು. ನನ್ನ ವಿನಾ ಹೋಗಕೂಡದು-ಎಂದು.' ನನಗೇನು! ನಾನು ಹಾಗೆ ಈ ವರ್ಷ ಅವಸರದಿಂದ ಪ್ರಸ್ತಮಾಡುವ ಹಾಗಿಲ್ಲ. ಪಾಪ, ಚಿಕ್ಕ ಮಗು. ಮುಂದಿನ ವರ್ಷ ನೋಡುವ; ದೇವರಿದ್ದಾನೆ. ಅಲ್ಲದೆ ಇನ್ನಿನ್ನು ದಿನ ಕಷ್ಟನೋಡಿ - ಮೊದಲಿನ ಹಾಗೆ 'ಕಾಯುಂಕುಳುವಾರು' ಎಂದು ನಂಬುವ ಹಾಗಿಲ್ಲ. ಎಲ್ಲರೂ ಆಸೆ ತೋರಿಸಬಹುದು. ನಾಳೆ 'ಹತ್ತು ಜನರ ತಾಯಿ; ಹಾದಿಯ ಮೇಲೆ ಬಿದ್ದು ಸಾಯಿ' ಎನ್ನುವ ಹಾಗಾದರೆ....ಬಸ್ರೂರು ನೀರಜೆ ನೋಡಿ. ಇವತ್ತು ಊಟಕ್ಕೆ ಅಕ್ಕಿಯಿಲ್ಲ; ಕೇಳಲಿಕ್ಕೆ ಜನವಿಲ್ಲ". ಇದೇ ರೀತಿಯಲ್ಲಿ ಮಾತು ಹೊರಡುತ್ತಲೇ ಇರುತ್ತದೆ. ಇಂದಿನ ಆಸೆ ಕೆಲವರದ್ದು ಧ್ವಂಸವಾದರೂ ನಾಳೆಗೆ ಮೊಮ್ಮಗಳ ಮನಸ್ಸನ್ನು ಒಲಿಸಿಯೇವು ಎಂದು ನಂಬಿಗೆಯಿಂದ ಇವತ್ತೇ ಅವಳ ಮನೆಯ ಜಗುಲಿಯ ಮುಂದೆ ಸುತ್ತಾಡುವವರೂ ಇದ್ದಾರೆ.

ಹೀಗೆಯೇ ಒಂದು ವರ್ಷ ಕಾಲ ಕಳೆಯಿತು. ಯುಗಾದಿ ಬಂದಿತು. ಮೊಮ್ಮಗಳು ದೊಡ್ಡವಳಾಗಿದ್ದಾಳೆ ಎಂದು ಗಜೇಟಿನಲ್ಲಿ ಪಾಸೂ ಆಯಿತು. ಅದರ ಬಳಿಕ ನಮ್ಮೂರಿನಲ್ಲಿ ಮೂರು ಬಲವಾದ ಪಾರ್ಟಿಗಳು ಆಗಿದ್ದಾವೆ. 'ಮೂರಲ್ಲ; ಆರು' ಎಂದು ಪರಮಯ್ಯ ಬೆರಳು ತೋರಿಸಿ ಹೇಳುತ್ತಾನೆ. ಯಾರ್‍ಯಾರು ಆಸ್ತಿ ಮನೆಗಳ ಅಡವಿಗೆ ಸಿದ್ಧರಾಗಿದ್ದಾರೆ-ಎಂಬುದೂ ಅವನಿಗೆ ತಿಳಿದಿದೆ.

ಪುಟ್ಟರಂಗಿಯೋ-ಬರಹಗಾರ್ತಿ. ನಮ್ಮೂರಿನ ಎಲಿಮೆಂಟರಿ ಶಾಲೆ ಮುಗುಚಿ ಬಂದವಳು. ಬರುವ ಮೊದಲೇ ಭಾರೀ ಕತೆಯೊಂದಾಯಿತು. ಅವಳಿಗೆ ಬರಹ ಬರುತ್ತದೆ ಎಂಬ ದಾಖಲೆಯೂ ಸಿಕ್ಕಿತು. ಯಾರೋ ಹೊಸತಾಗಿ ಬಂದ ಆಸಿಸ್ಟಾಂಟ ಮಾಸ್ಟರನಂತೆ, ರಾಮಚಂದ್ರಯ್ಯ, ಒಂದು ಕಾಗದ ಬರೆದು ಅವಳ ಕೋಪಿ ಬೂಕಿನಲ್ಲಿ ಇರಿಸಿದನಂತೆ. ಅದು ಗ್ರಹಚಾರ ವಶಾತ್ ಅಜ್ಜಿಯ ಕೈಗೆ ಬಿದ್ದು "ಈ ಏಳುವರೆ ರೂಪಾಯಿನ ಮಾಸ್ತರನಿಗೆ ನನ್ನ ಮೊಮ್ಮಗಳ ಯೋಚನೆಯೇ?" ಎಂದು ಕಿಡಿಕಿಡಿಯಾದಳು. ರಾಮಚಂದ್ರಯ್ಯನಿಗೆ ವಾಸ್ತವವಾಗಿ ೧೫ ರೂಪಾಯಿ ಸಂಬಳವಿದೆ.-ಅನ್ನಿ. ಆದರೆ ಅಕ್ಕಣಿ ಅದೇ ದಿನ ಶಾಲೆಯ ತನಕ ಹೋಗಿ ರಣರಂಪಮಾಡಿ ಬಂದಳು. ಪರಿಣಾಮವಾಗಿ, ರಾಮಚಂದ್ರಯ್ಯ ಕಾಯಿಲೆ ರಜೆ ತೆಗೆದುಕೊಂಡು, ಊರು

ಬಿಡ್ಡವ ತಿರುಗಿ ಬರಲಿಲ್ಲ. ಅಲ್ಲಿಂದಲೇ ಟ್ರಾನ್ಸ್‌ಫರ್ ಆಯಿತು-ಅನ್ನುತ್ತಾರೆ. "ಅಷ್ಟು ಮಾಡಿಸಿದ್ದೇನೆ ನಾನು" ಎಂದು ಅಕ್ಕಣಿ ಎದೆತಟ್ಟಿ ಹೇಳುತ್ತಾಳೆ. ಆದರೆ ಹೆಡ್‌ಮಾಸ್ತರರನ್ನು ಕೇಳುತ್ತೀರೋ; ಅವರು ನಗುತ್ತಾರೆ:

"ಪರಮಯ್ಯಾ, ನಿನಗೆ ತಿಳಿಯದು. ರಾಮಚಂದ್ರಯ್ಯ ಎಂದರೆ ದನ. ಶುದ್ಧ ಭೃಗು. ಹುಡುಗಿಯ ಒಪ್ಪಿಗೆಯಿದ್ದೇ ನಡೆದ ಕಥೆಯಿದು. ನಾನು ಎಲ್ಲವನ್ನೂ ಕರೆದು ತನಿಖಿಮಾಡಲಿಲ್ಲವೇ? ಆದರೆ ನನಗೆ ಏಕೆ?"

ಪುಟ್ಟರಂಗಿ ಬರಹಗಾರ್ತಿಯಾದುದರಿಂದ ಲಾಭವೇ ಆಯಿತು. ಒಳಗೊಳಗಿಂದ ಹತ್ತಾರು ಕಾಗದಗಳು ಬರುತ್ತವೆ. ಸಾಕಷ್ಟು ಇನಾಮು ಕಾಣಿಕೆಗಳೂ ಬರುತ್ತವೆ. ಅಜ್ಜಿಗೆ ಒಂದೂ ತಿಳಿಯದಂತೆ. ಅಜ್ಜಿ ಉರಿದುಬಿದ್ದುದೇ ಮೊನ್ನೆ; ಥೇಟು ಜ್ವಾಲಾಮುಖಿಯಾದಳು ಅಕ್ಕಣಿ. ನಡುರಾತ್ರಿಯಲ್ಲಿ ಎದ್ದು, ಮೊಮ್ಮಗಳನ್ನು ಬಡಿದು ಎಚ್ಚರಮಾಡಿಸಿ "ಏ ಗಯ್ಯಾಳಿ ನನ್ನ ಮರ್ಯಾದೆ ತೆಗೆದೆಯಲ್ಲವೇ! ನೀನೀಗ ಹೆತ್ತರೆ ಮಂದಿಗೆ ಮುಖ ತೋರಿಸಲಿಕ್ಕುಂಟೇ? ಗಂಗೊಳ್ಳಿಯವರು ೩೦೦೦ಕ್ಕೆ ಬಂದಿದ್ದರು. ನಾನು ೫೦೦೦ಕ್ಕೆ ಏರಿಸಿದರೆ ನೀನು ಆ ಶಾಲೆಯ ಭಿಕನಾಸಿಯನ್ನು ಕಟ್ಟಿಕೊಂಡುಬಿಟ್ಟೆಯಲ್ಲ" ಎಂದಳು. ಮೊಮ್ಮಗಳು "ನೀನು ಸುಮ್ಮನೆ ಬಿದ್ದಿರು; ಅದೆಲ್ಲ ನನ್ನ ಖುಶಿ" ಎಂದಳು. ಹದವಿಮೀರಿತು; ಅಕ್ಕಣಿಗೆ ಅಳುಬಂದಿತು.

ಇಷ್ಟು ನಿಜ–ಈ ಘಟನೆಯಾಗಿ ಒಂದು ವರ್ಷ ಕಳೆದರೂ ಪುಟ್ಟರಂಗಿ ತಾಯಿಯಾಗಲಿಲ್ಲ. ಗಂಗೊಳ್ಳಿಯವರು ನಮ್ಮ ಊರಿಗೆ ಬಂದು 'ರೈಸುಮಿಲ್' ಇರಿಸುತ್ತಾರೆಂಬ ಸುದ್ದಿ.

ಅಂತು ಇತ್ತೀಚೆಗೆ ಚನ್ನ ಮಯ್ಯರ ಮೇಲೆ ಹಲವರು ಕತ್ತಿಕಟ್ಟಿ ನಿಂತಿದ್ದಾರೆ. "ಇದಕ್ಕೆ ಪುಟ್ಟರಂಗಿಯೂ ಅವಳ ಅಜ್ಜಿಯೂ ಹೇತು" ಎನ್ನುವವರಿದ್ದಾರೆ.



## ೯. ಚನ್ನಮಯ್ಯರು

ಚನ್ನ ಮಯ್ಯರ ಪ್ರಾಯವೆಷ್ಟೆಂದು ಸಮನಾಗಿ ತಿಳಿಯದು. ಇನ್ನೂ ಪ್ರಾಯಕ್ಕೆ ಬಂದಿಲ್ಲ, ವಯಸ್ಸು ಬರಿಯ ಹದಿನಾರು ಎನ್ನುತ್ತಾರೆ ಒಬ್ಬರು. ಇಲ್ಲ, ೨೦-೨೩ಆದರೂ ಆಗಿರಬೇಕು, 'ಕಾಣುವುದಕ್ಕೆ ಆಳು ಸಣ್ಣದಾದರೆ ಏನು?' ಎನ್ನುತ್ತಾರೆ ಹಲವರು. ಕಾಣುವುದಕ್ಕೆ ಹೇಗೂ ಇರಲಿ, ವರ್ಷ ಎಷ್ಟೋ ಇರಲಿ; ಪಟ್ಟಕ್ಕೆ ಬಂದ ಒಂದು ವರ್ಷದಲ್ಲಿಯೇ ಇಷ್ಟು ಹೆಸರಿಗೆ ಬಂದವರು ಯಾರೂ ಇಲ್ಲ; ಅದು ಮಾತ್ರ ನಿಶ್ಚಯ. ಕಳೆದ ವರ್ಷದ ತನಕ 'ಚನ್ನ ಮಾಣಿ'ಯಾಗಿದ್ದವನು, ಈಗ "ಚನ್ನಮಯ್ಯರು" ಎನಿಸುವುದು ಸುಲಭದ ಕೆಲಸವಲ್ಲ. ಪರಮನ ಹತ್ತಿರ ಕೇಳಿದರೆ ಅದರ ಗುಟ್ಟನ್ನು ಹೇಳುತ್ತಾನೆ: "ಅಯ್ಯ - ನಮ್ಮ ಊರವರು....ಹೆಣ ಬಿದ್ದಲ್ಲಿ ಹಕ್ಕಿಗಳ ಸಾರಥಿಯಾದ ಹಾಗೆ ಹಣವಿದ್ದಲ್ಲಿ ತಯಾರು. ಚಿಕ್ಕಮಯ್ಯರು ಇರುವಷ್ಟು ದಿವಸ ಅವರ ಮನೆಯ ಜಗುಲಿಯ ಹತ್ತಿರ ಸುಳಿಯದಿದ್ದ ನಾಯಿಗಳು ಇವತ್ತು ಅದೇ ಜಗುಲಿ ದಾಟಿ ಹೆಬ್ಬಾಗಿಲು ಏರಿ, ಮೀಸೆ ತಿರುವುತ್ತಿದ್ದಾವೆ. ಏನು ಹೇಳಲಿ!"

"ಹಾಗೆ ನನಗಾದರೂ ಇಷ್ಟು ಬುದ್ಧಿ ಮಾತು ಚನ್ನನಿಗೆ ಹೇಳುವ ಎಂದು ಅನಿಸುತ್ತದೆ. ನನ್ನ ಕಣ್ಣಮುಂದೆಯೇ ಕೌಪೀನ ಉಟ್ಟ ಮಕ್ಕಳಿವು. ಆದರೆ —ಅವನಿಗೆ ಈಗ ಸಾರಥಿಯಾದ ಆ ನಸ್ರಾಣಿ ಸುಬ ಭಟ್ಟ; ಆ ತಿಮ್ಮ, ಆ....ಸುಟ್ಟವ, ಸುಡುಗಾಡಿನವ-ಇವರೆಲ್ಲರ ದೆಸೆಯಿಂದಾಗಿ ಏನು ಹೇಳಿದರೂ ಗೋರ್ಕಲ್ಲ ಮೇಲೆ ಮಳೆಕರೆದಂತೆ ಸರ್ವಜ್ಞ, ಎಂಬ ಹಾಗೆ ಆಗಿದೆ. ಅಪ್ಪ ಮಾಡಿಟ್ಟ ಹಣ ತುಂಬ ಇದೆ. ಅದು ನಗದಿ ೫೦,೦೦೦ಕ್ಕೆ ಕಡಿಮೆಯಿಲ್ಲ ಅನ್ನುತ್ತಾರೆ! ಅಷ್ಟು ಇದ್ದೀತು. ಅಂದರೆ ಚಿಕ್ಕಮಯ್ಯರು ಪ್ರಾಮಾಣಿಕವಾಗಿ, ಹೊಟ್ಟೆಗೂ ತಿನ್ನದೆ ಅಮರಿಸಿ ಇಟ್ಟಂಥ ದುಡ್ಡು ಅದು. ಮೇಲೆ ಆಸ್ತಿ ಏನಾದರೂ ೧೦ ಕೋರ್ಜಿಗೆ ಕಡಿಮೆಯಿಲ್ಲ; ಈಗ ಎಲ್ಲರೂ ಸೇರಿಕೊಂಡು ಧೂಳಿಂ ಹಾರಿಸುತ್ತಾರೆ.

"ಹಾರಿಸುವುದೇನು-ಈಗಲೇ ಅರ್ಧವಾಯಿತು ಅನ್ನುತ್ತಾರೆ ಕೆಲವರು. ಮುಕ್ಕಾಲೇ ಮುಗಿಯಿತು ಅನ್ನುವವರು ಹಲವರು. ೫೦,೦೦೦ ರೂಪಾಯಿಯಲ್ಲಿ ಮುಕ್ಕಾಲು ಎಂದರೆ ಒಂದು ೩೦,೦೦೦ ಆದರೂ ಆದೀತಲ್ಲ.

ಅಷ್ಟನ್ನೂ ಒಂದು ವರ್ಷದಲ್ಲಿ ಚಟ್ಟು ಎಬ್ಬಿಸುವುದಕ್ಕೆ ಧೀರನೇ ಸರಿಯಪ್ಪ ಚನ್ನಪ್ಪ....ಯಾರ್‍ಯಾರಿಗೆ ತಿನ್ನಿಸಿದನ್ನೋ ಏನು ಕತೆಯೋ....

"ನಸ್ರಾಣಿ ಸುಬ್ಬಣ್ಣ ಭಟ್ಟನಿಗೆ ರೂ. ೬೦೦೦ ಸಾಲವಂತೆ; ನೋಟಿಲ್ಲ, ದಸ್ತಾವೇಜಿಲ್ಲ. ಅದನ್ನು ಬರೆಯಿಸಿಕೊಂಡವರಿಗೂ ಈ ಸುಬ್ಬ ಏನೊಂದೂ ಕೊಟ್ಟುದು ಇಲ್ಲ. 'ಮಡುವಿಗೆ' ಹಾಕಿದ ಹಾಗೇ ಸರಿ, ಅವನಿಗೆ ಕೊಟ್ಟಂಥ ದುಡ್ಡು. ನಾನೆನ್ನುತ್ತೇನೆ-ಅಕ್ಕಣಿ ಮೊಮ್ಮಗಳನ್ನು, ಅಕ್ಕಣಿಗೆ ತಿಳಿಯದ ಹಾಗೆ ಚನ್ನಪ್ಪನಿಗೆ ತಗಲಿಸಿ ಹಾಕಿದ್ದು ಇವನೇ ಇರಬೇಕು. ಇವನ ದಲಾಲಿ ಕೆಯೇ ಅದಕ್ಕೆ ಕಾರಣ.

"ಅದೆಂಥದೋ ಬೇಂಕಿನ ಜಾಮೀನು ಅಂದರು – ೧೬,೦೦೦ಕ್ಕೆ, ತೇಜಪ್ಪ ಸಾಹುಕಾರರ ಹತ್ತಿರ ಕೇಳಿದನಂತೆ. ಅದಕ್ಕೆ ನಮ್ಮ ಸಾಹುಕಾರರು, ಜನ್ನ ಪೈಗಳು 'ಆಗಲಿ, ಮಯ್ಯರೇ, ನಮ್ಮ ತೇಜಪ್ಪ ಭಂಡಾರಿಯೆಂದರೆ ವಹಿವಾಟುದಾರ, ಏಕೀನಿ. ಈ ಸಾಟೆ ಸಮಯದಲ್ಲಿ ಅವನಿಗೆ ಮಗುಚಾಡ ಲಿಕ್ಕೆ ಎಷ್ಟು ಹಣ ಇದ್ದರೂ ಸಾಲದು. ಹಾಗಾಗಿ ಕೇಳಿರಬೇಕು. ಮೂರು ತಿಂಗಳೊಳಗೆ ಮುಂಬಯಿಂದ ಹಣ ಬರುತ್ತದೆ; ತುಂಬಿಸುತ್ತಾನೆ. ನಾನೇ ಹಾಕುತ್ತಿದ್ದೆ ಅವನಿಗೆ ಜಾಮೀನು ಇಷ್ಟು ದಿವಸ. ನನಗೇ ಗರ್ಜುಬಿದ್ದು ಬ್ಯಾಂಕಿನಿಂದ ೧೦ ಸಾವಿರ ಕಡಕಟ್ಟು ಮಾಡಿದ್ದರಿಂದ, ನನ್ನ ಜಾಮೀನೇ ಆಗದು' ಎಂದರಂತೆ.

"ಯಾವ ತೇಜಪ್ಪ ಭಂಡಾರಿ ಇವನು-ಎಂದು ನನಗೆ ಗೊತ್ತಾಗುವುದಿಲ್ಲ. ಯಾರಾದರೂ ಭಂಡಸಾಲೆಯ ಭೂಪತಿ ಇರಬೇಕು. ಈಗಿನ ದಿವಸದಲ್ಲಿ ಬ್ಯಾಂಕಿನ ಜವಾಬುದಾರಿ ಹಾಕಿದವನ ಕುಲಕೋಟಿ ಉದ್ಧಾರವಾಯಿತು. ಅಲ್ಲವಾದರೆ ಕೆಳಬೈಲು ನಾರ್ಣಪ್ಪನ ಮುಂಡ ಮುಚ್ಚಿದ್ದು ಹ್ಯಾಗೆ? ತಿಂದದ್ದೂ ಅಲ್ಲ; ತೇಗಿದ್ದೂ ಅಲ್ಲ; ಜಾಮೀನು. ಜಾಮೀನೋ, ಹಂದಿಮೀನೋ-ಒಟ್ಟು ಮನೆಮಾರು ಎಲ್ಲವೂ ಬ್ಯಾಂಕಿನ ಹಣಕ್ಕೆ ಅಡವಾಯಿತಲ್ಲ. ಈಗ ಈ ಹುಡುಗ ಸಿಕ್ಕಿದ್ದಾನೆ; ಅವನನ್ನು ಲಗಾಡಿ ತೆಗೆಯುತ್ತಾರೆ; ಚೂರು ಚೂರೂ ಇರಿಸುವು ದಿಲ್ಲ....ಶುದ್ಧ ಹಪ್ಪುಕಳಗಳು.

"ಅತ್ತ ತೇಜಪ್ಪ, ನಸ್ರಾಣಿ ಸುಬ್ಬ, ಗಾಣದ ಸಂಕ ಇವರು ಕುಣಿಸಲಿಕ್ಕೆ ಇತ್ತ ಪುಟ್ಟರಂಗಿಯ ಬಲೆಗೆ ಅವನು ಬಿದ್ದದ್ದು ನಿಜವಾದರೆ ಅದೊಂದೇ ಸಾಕು. ಇವರಿಂದ ಚಿಕ್ಕ ಮಯ್ಯರ ಆಯುಷ್ಕಾಲದ ದಾಡಿತ ಎರಡು ವರ್ಷ

ಗಳಲ್ಲಿ ನಿರ್ಮಾಣವಾಗುತ್ತದೆ."

ನೀವೇ ಚನ್ನ ಮಯ್ಯರ ಠೀವಿ ನೋಡಬೇಕು. ಬೆಳಿಗ್ಗೆ ಎಂಟು ಘಂಟೆಯಾಯಿತೆಂದರೆ ಸವಾರಿ ಪೇಟೆಗೆ ಹೊರಟಿತು. ಕುಳ್ಳು, ನಸುಗಪ್ಪು ಆಳು. ಮುಂದಲೆ ಕ್ರಾಪು! ಹಿಂದಲೆ ಜುಟ್ಟು. ಬಲಗೈಯ್ಯ ಐದು ಬೆರಳುಗಳಿಗೆ ಆರು ಉಂಗುರಗಳು. ಮಲ್ಲು ಅಂಗಿ; ಉಡಲಿಕ್ಕೆ ರಸ್ತೆ ಧೂಳು ಗುಡಿಸುವಂಥ ಜರಿ ಪಂಚೆ. ಅಂಗಿಯ ಮೇಲಕ್ಕೆ ಚಿನ್ನದ ಚೈನು. ಕೈಗೆ ರಿಸ್ಟುವಾಚು. ಮುಖಾಲಂಕಾರಕ್ಕಾಗಿ ಕನ್ನಡಕವೂ ಇದೆ. ಕಾಲಿಗೆ ತುಳಿಯಲು 'ಸಿಲ್ಪರ್;' ಕೈಯ್ಯಲ್ಲಿ ಬೆಳ್ಳಿ ಕಟ್ಟಿದ ಕೋಲು. ಬೀಡಿಯ ಹೊಗೆ ಬಾಯಿಂದ ತಪ್ಪಿದ್ದಿಲ್ಲ.

ಬಂದರೆ ಅವರೊಬ್ಬರೇ ಬರುವ ಹಾಗೂ ಇಲ್ಲ. ಜತೆಗೆ—ಅವರು ನಾಳೆ ನಗುವುದಾದರೆ, ಸಂಕೇತ ತಿಳಿದು ಇಂದೇ ನಗಾಡುವಂಥ ಧೂರ್ತಭಟರು. ಕೌರವನಲ್ಲೂ ಇಂಥ ಮಂತ್ರಿಗಳು ಸೇರಿರರು. ಅವರ ಆಚೀಚೆ—ನಸ್ರಾಣಿ ಸುಬ್ಬ ಭಟ್ಟ, ಮತ್ತೂ ಬೇರೆಯಾರಾದರೂ ಒಬ್ಬಿಬ್ಬರು ಇರುತ್ತಾರೆ. ಅವರ ಹಿಂದೆ, ಒಂದು ಬೀಸಣಿಗೆ ಹಿಡಿದುಕೊಂಡು, ತಂಬುಲವನ್ನು ಹಾದಿಯ ಎರಡು ಮಗ್ಗುಲಿಗೂ ತುಪ್ಪುತ್ತ ಬರುವ ಗಾಣದ ಸಂಕಪ್ಪ.

ಚನ್ನ ಮಯ್ಯರ ಸವಾರಿ ಮೊದಲಿಗೆ ಜನ್ನ ಪೈಗಳ ಚಪ್ಪರಕ್ಕೆ ಬಂದು ಅಲ್ಲಿ ಒಡ್ಡೋಲಗವಾಗಬೇಕು. ಅಲ್ಲಿಗೆ ಹೋಟೆಲಿನಿಂದ ಕಾಫಿ, ಉಪ್ಪಿಟ್ಟು, ಅವಲಕ್ಕಿ (ಮತ್ತೇನು ಮಣ್ಣು ಆ ಅನಂತ ಪ್ರಭು ಅಂಗಡಿಯಲ್ಲಿ ಸಿಗುತ್ತದೆ?) ತರಿಸಿ ಟಿಪಿನಿ ಮುಗಿಯಬೇಕು. ಆ ಮೇಲೆ 'ಪೈಗಳೇ, ನಮ್ಮ ಹೊಸ ಬಂಗ್ಲೆ ನೋಡಿ ಬರುತ್ತೇವೆ. ಈ ಕಳ್ಳ ಕೆಲಸದವರನ್ನು ನಂಬಿ, ಈ ವರ್ಷ ಬಂಗ್ಲೆ ಮುಗಿಯಲಿಕ್ಕಿಲ್ಲ ಎಂದು ಕಾಣುತ್ತದೆ' ಅನ್ನುತಾರೆ.

ಸರಿ, ಖಾವಂದರೂ ಪಟಾಲಮೂ ಬಂಗ್ಲೆ ಕಟ್ಟುವಲ್ಲಿಗೆ ಹೊರಡುತ್ತದೆ. ಚನ್ನ ಮಯ್ಯರಿಗೆ ತಮ್ಮ ಮನೆಯಲ್ಲಿ ನಾಲ್ಕು ಗಳಿಗೆ ಕಳೆಯುವುದಕ್ಕೆ ಬೇಸರ. ಅದರಿಂದಾಗಿ ರಸ್ತೆ ಬದಿಯಲ್ಲಿ ಒಂದು ಅಂಬಲವೋ, ಹೆಬ್ಬಾಗಿಲೋ, ಬಂಗಲೆಯೋ—ಏನೋ ಒಂದನ್ನು ಬೇಗನೆ ಕಟ್ಟಿಸುತ್ತಾರಂತೆ. ಜೋಡುಕಲ್ಲಿನ ಮಹಡಿ ಕಟ್ಟಡ. ಸಾಗುವಾನಿ ಮರವಲ್ಲದೆ ಕಾಟುಮೋಟು ಮೋಪು ಹಾಕಕೂಡದೆಂದು ಗಾಣಿಗ ಸಂಕಪ್ಪನ ಅಂಬೋಣ. 'ನೆಲಕ್ಕೆ ಬಣ್ಣದ ಇಟ್ಟಿಗೆ ಹಾಕಿಯೇ ಶುದ್ಧ'—ಎಂದು ನಸ್ರಾಣಿ ಸುಬ್ಬನ ಹೇಳಿಕೆ. ಅಂತು ಭಾರಿಯ ಬಿರುಸಿನಿಂದ ಕೆಲಸ ತೊಡಗಿದೆ. ಧನಿಯರು ಬರುತ್ತಾರೆ—ಎಂದಕೂಡಲೇ ಆ

ಕೂಲಿಗಳೂ ಆಚಾರಿಗಳೂ ಬಂದು ದಡಬಡ ಮಾಡುವುದನ್ನು ನೋಡಬೇಕು! ಮಯ್ಯರು ಬಂದು ನಿಂತರೆ-ಸಂಕಪ್ಪ ನಗರ ಸಂಸ್ಥಾನದ ಶಿವಪ್ಪನಾಯ್ಕನ ಹಾಗೆ, "ಯಾರಲ್ಲಿ, ಆ ತುಂಡು ಆಚಿಡಿ. ಇವತ್ತು ಕಲ್ಲು ಎಷ್ಟು ಬಂತು? ಸುಣ್ಣ ಬಂದು ಬಿತ್ತೋ ಅಲ್ಲಿ; ಅಡ್ವಾನ್ಸು ತಿಂದು ಹಾಕಿದ್ದೇ ಸರಿಯೋ? ಹೇಳಿಬಿಡು –ಆ ಜಿಲ್ಲುಗೆ. 'ನಾಳೆ ಸಂಜೆಯೊಳಗೆ ೪೦ ಮುಡಿ ಸುಣ್ಣ ಹಾಕಿಸದಿದ್ದರೆ ಅವನದೇ ಸುಣ್ಣದ ಗೂಡಿನಲ್ಲಿ ಧನಿಯರು ಅವನನ್ನು ಸುಡಿಸಿಯಾರು' ಎಂದು. ಏನೆಂದು ತಿಳಿದಿದ್ದಾನೆ ಅವ!" ಹೀಗೆ ಅನುಜ್ಞೆಮಾಡುವಂಥವನಾಗಿ ಧನಿಗಳ ಕಡೆಗೆ ನೋಡಿ "ಅಯ್ಯ, ಆ ಜಿಲ್ಲುಗೆ ಏನಾದರೂ ಕಾಯಿಸದೆ ಅವನು ಸಮನಾಗಲಾರ. ೫,೦೦೦, ಕಲ್ಲು ಕೆತ್ತಿಯಾಯಿತು. ಇವನ ಸುಣ್ಣ ಬಾರದೆ ಗೋಡೆ ಏರಿಸುವ ಹಾಗಿಲ್ಲ" ಎಂದನು.

ಮಯ್ಯರು ರೇಗಿ "ಇದೇ ಆಯಿತಲ್ಲ....ಸುಣ್ಣ ಇದ್ದರೆ ಹೊಯಿಗೆ ಇಲ್ಲ. ಹೊಯಿಗೆ ಬಂದರೆ ಮೇಸ್ತ್ರಿಯಿಲ್ಲ. ಇವರು ಬಂದರೆ ಮರ ಇಲ್ಲ; ಮರ ಇದ್ದರೆ ಆಚಾರಿಯಿಲ್ಲ....ನನಗೆ ಸಿಟ್ಟು ಬಂದರೆ ಬೇರೆಯೇ ಜನರನ್ನು ತರಿಸುತ್ತೇನೆ. ಒಂದಕ್ಕೆ ಡಬ್ಬಲು ಕೊಟ್ಟು ಕುಂದಾಪುರದಿಂದ ಜನ ತರಿಸಿ, ಇವರಿಗೆ ಬುದ್ಧಿ ಕಲಿಸಿಯೇನು, ಸಂಕಪ್ಪ. ನೀನು ಜಿಲ್ಲು ಮನೆಯ ವರೆಗೆ ಹೋಗಿ ಅವನನ್ನು ದರದರನೇ ಎಳೆದುಕೊಂಡು ಬಾ."

"ಸಂಜೆ ತಂದರೆ ಸಾಲದೇ? ಈಗ ಅವನು ಮನೆಯಲ್ಲಿರುತ್ತಾನೆಯೇ? ಚಿಪ್ಪಿಗೆ ಹೋಗಿರಬೇಕು" ಎಂದನು.

"ಸಾಯಂಕಾಲವಾದರೆ ಸಾಯಂಕಾಲ; ಅವನ ಬಿಡುಬಾಲ ಹಿಡಿದಾದರೂ ತರಬೇಕು."

ಸರಿ, ಕಟ್ಟಡದ ಸುಪರ್‌ವಿಜನ್ ಆಯಿತು. ಎಲ್ಲರೂ ಅಲ್ಲಿಂದ ಹೊರಟರು. ಇವರ ಬೆನ್ನಿಗೆ ಕೆಲಸಗಾರರ ವೋಲಗಳು ಯಥಾಪ್ರಕಾರ ನಿತ್ಯದ ಆಮೆಗಳಾದುವು.

ತಿರುಗಿ ಸವಾರಿ ಜನ್ನಪೈಗಳ ಅಂಗಡಿಗೆ ಬಂದಿತು. ನಮ್ಮೂರಲ್ಲಿ ನಾಲ್ಕು ಬೀದಿಗಳೂ ಇಲ್ಲದೆ, ಇವರ ರೀತಿಗೆ ಸಮನಾದ ದರ್ಬಾರು ನಡೆಯುವ ಹಾಗಿಲ್ಲ. ಇನ್ನು ತಿರುಗಿ ಕಾಫಿಯನ್ನು ತರಿಸಿ ಮುಗಿಸುವಾಗ ಹೊತು ನೆತಿಗೇರಿಯಾಗುತ್ತದೆ. 'ಇನ್ನು ಮನೆಗೆ ಹೊರಡುವ' ಎಂದು ಹುಕುಂ ಆಗುತ್ತದೆ. ಡ್ರೈವರು, ಎಂಜಿನು ಇಲ್ಲದ ಕಾಲುಬಂಡಿಯನ್ನು ತಾವೇ ತಿರುಗಿಸಿ ಕೊಂಡು

ಮನೆಗೆ ಹೊರಡುತ್ತಾರೆ. ಮನೆಯಲ್ಲಿ ಸ್ನಾನ, ಊಟ ತೀರಿಸಿಕೊಂಡು ತಿರುಗಿ ಮೂರು ಘಂಟೆಯ ಸುಮಾರಿಗೆ ಪೇಟೆಗೆ ಹೊರಬೀಳುತ್ತಾರೆ. ಈಗ ನೇರವಾಗಿ ಅಕ್ಕಣಿಯ ಮನೆಗಲ್ಲ, ಅಕ್ಕಣಿ ಮೊಮ್ಮಗಳ ಮನೆಗೆ. ಅಂದರೆ ಒಂದಾಗಿದೆ; ಅವರ ಮನೆಯಲ್ಲೇ ಎರಡು ಪಾಲಾಗಿದೆ. ಅಕ್ಕಣಿ ಸಿಟ್ಟುಗೊಂಡು ಮೊಮ್ಮ ಗಳಿಂದ ಬೇರೆಯಾಗಿದ್ದಾಳೆ. ಅಡಿಗೆ ಬೇರೆ, ಬೇರೆ. ಎಲ್ಲರ ಸವಾರಿಯೂ ಅಕ್ಕಣಿ ಮನೆಯ ಜಗಲಿಯನ್ನು ಅಲಂಕರಿಸುತ್ತದೆ. ಇವರು ಬಂದರು ಎಂದರೆ ಜ್ವಾಲಾಮುಖಿಯ ಹಾಗೆ ಉರಿಯುತ್ತಿರುವ ಅಕ್ಕಣಿ ಇನ್ನೊಂದು ಬಾಗಿಲಿನಿಂದ ಎದ್ದು ನೆರೆಕರೆಗೆ ಹೋಗಿಬಿಡುತ್ತಾಳೆ. ನಸ್ರಾಣಿ ಸುಬ್ಬ ಪೀಠಿಕೆಗೆ "ಪುಟ್ಟಮ್ಮ, ಇವತ್ತು ನಿನ್ನ ಅಜ್ಜಿಯ ಕಾರುಭಾರವೇನು? ಮಾತನಾಡಲಿಲ್ಲವೇ ನಿನ್ನ ಹತ್ತಿರ?" ಎನ್ನುತ್ತಾನೆ.

"ಅವಳು ಮಾತನಾಡದಿದ್ದರೆ ನನಗೇನು? ಬಡವರ ಸಿಟ್ಟು ಹೊಟ್ಟೆಗೆ ಮಾರಿ. ಆದರೆ ಹೀಗೆ ಮುಖ ಮುರಿದುಕೊಂಡು ಒಂದೇ ಮನೆಯಲ್ಲಿ ಬಿದ್ದಿರುವುದಕ್ಕಿಂತ ಎಲ್ಲಾದರೂ ಕೊಟ್ಟಿಗೆಯಲ್ಲಿ ಬೇಯಿಸಿ ತಿನ್ನುವುದು ವಾಸಿ "ಎಂದು ಮುಖ ಸಣ್ಣಗೆ ಮಾಡಿದುದನ್ನು ಕಂಡು "ಯಜಮಾನರು ನಿನಗಲ್ಲವೇ ಬಂಗಲೆ ಕಟ್ಟಿಸುತ್ತಿರುವುದು? ಅದು ಮುಗಿಯಿತು ಎಂದರೆ ಇವಳ ಹೆಣ ಈ ಹಾಳು ಮನೆಯಲ್ಲಿರಲಿ. ನೀನು ಎದ್ದುಬಿಡು. ಬೇರೆ ಅಡಿಗೆ ಮಾಡಿಸುವ—ಸಂಕಪ್ಪ, ಹೋಗಿ ಹೋಟೇಲು ಪ್ರಭುವಿಗೆ ಹೇಳು–ಒಂದು ಆರು ಕಾಫಿ ಟಿಫಿನು ಬೇಗ ಹುಡುಗನ ಹತ್ತಿರ ಕಳುಹಿಸಲಿಕ್ಕೆ" ಎಂದು ಅನುಜ್ಞೆಯಾಗುತ್ತದೆ. ಅದಕ್ಕೆ ನಸ್ರಾಣಿ ಸುಬ್ರಾಯ-"ಆರು ಯಾಕೆ? ನಾನೀಗ ಕುಂದಾಪುರಕ್ಕೆ ಹೊರಟೆ. ತಡಮಾಡಿದರೆ ನನಗೆ ಬಸ್ಸು ತಪ್ಪುತ್ತದೆ. ಏನಾದರೂ ತರಬೇಕಾದರೆ ಹೇಳಿ" ಹೀಗೆಂದು ಹೇಳಿ, ತಾನು ಹೊರಡುತ್ತಾನೆ. ಅಲ್ಲಿಂದ ಧನಿಯವರನ್ನು ಕರೆದುಕೊಂಡು ಮಹಡಿಯನ್ನು ಏರುತ್ತಾಳೆ ಪುಟ್ಟರಂಗಿ.

ಸರಿ, ಇತ್ತ ರಾಮಯ್ಯ ನಾಯ್ಕರ ವಿಚಾರ ದೇವರೇ ಗತಿ ಎಂದು ಊರಲ್ಲೆಲ್ಲಾ ವರ್ತಮಾನ. ಅವರು ಮಿಲ್ಲು ಹಾಕಲು ತಯಾರಿ ನಡೆಸಿದ್ದಾರೆ. ಇಂಜಿನು ಬಂದಿದೆ. ಅವರ ಕಡೆಯಿಂದ ದಿವಕ್ಕೊಮ್ಮೆಯಾದರೂ ಆ ಊರಿಗೆ ಜನರು ಬರುತ್ತಿದ್ದಾರೆ. ಪ್ರತಿ ಬೆಳಗಿನ ಎಂಟು ಘಂಟೆಗೆ ಅಕ್ಕಣಿಯ ಮನೆಗೆ ಅವರು ಸಹ ಬರುತ್ತಾರೆ. 'ಇವತ್ತೇನಾಯಿತು?' ಎಂದು ವಿಚಾರಿಸಿಕೊಂಡು ಹೋಗುತ್ತಾರೆ.

ಅಂದರೆ ಸತ್ಯದ ಸಂಗತಿ ಹೀಗಂತೆ: ರಾಮಯ್ಯ ನಾಯ್ಕರಿಂದ ಅಕ್ಕಣಿ ತನ್ನ ಮೊಮ್ಮಗಳ ನೆಪದಿಂದ ೨೦೦೦ ರೂಪಾಯಿ ಚಿನ್ನ ತರಿಸಿಟ್ಟಿದ್ದಾಳಂತೆ. ಆದರೆ ಆ ಮೊಮ್ಮಗಳು, ಇವಳಿಗೆ ತಿಳಿಯದಂತೆ ಚನ್ನಮಯ್ಯರನ್ನು ಸೇರಿಯಾಯಿತು. ಈಗ ತಿಳಿದಿದೆ; ಉಪಯೋಗವಿಲ್ಲ. ಇತ್ತ ಅಕ್ಕಣಿಯ ಕೈಗೆ ಬಂದ ಹಣ ರಾಮಯ್ಯ ನಾಯ್ಕರಿಗೆ ತಿರುಗಿ ಸಿಗುವಂತೆಯೂ ಇಲ್ಲ. 'ಮೊಮ್ಮಗಳನ್ನು ಚನ್ನಪ್ಪಯ್ಯನಿಂದತಪ್ಪಿಸಿ ನಿಮಗೆ ಕೊಡಿಸಿದರಾಯಿತಲ್ಲ' ಎಂದು ಅಕ್ಕಣಿಯಂತು ಪಣತೊಟ್ಟಿದ್ದಾಳೆ. ಇನ್ನು ಯಾರ್‍ಯಾರ ಅದೃಷ್ಟ ಹೇಗೇಗೆಂದು ದೇವರೇ ಹೇಳಬೇಕು. ಕಾರಣ–ಪುಟ್ಟರಂಗಿ ಬಾಬಿನಲ್ಲಿ, ನಾಗಯ್ಯ ಅಕ್ಕಣಿಯನ್ನು ಮಾತನಾಡಿಸಿದ್ದಾನೆ–ಎಂದು ಸಹ ವದಂತಿಯಿದೆ. ಇತ್ತ ನಮ್ಮ ಸೀತ್ಯೆತಾಳರು ಅಕ್ಕಣಿ ತಪ್ಪಿದರೇನು? ಪುಟ್ಟರಂಗಿಯಾದರೂ ತಮ್ಮ ಪಾಲಿಗೆ ಬಂದಾಳೋ ನೋಡಬೇಕೆಂದು ಕೀಲಿ ತಿರುಗಿಸುತ್ತಾರೆಂಬ ವರ್ತಮಾನ ಚನ್ನಮಯ್ಯರಿಗೆ ಸಿಕ್ಕಿದೆಯಂತೆ. ಅದೇ ವಿಷಯದಲ್ಲಿ ಈಗ ಮೇಲಿನ ಮಹಡಿಯಲ್ಲಿ ಚನ್ನಮಯ್ಯ ಪುಟ್ಟರಂಗಿಯರಲ್ಲ ಪಂಚಾಯತಿ ನಡೆಯುತ್ತಿದೆ.



## ೧೦. ಗಾಣದ ಸಂಕಪ್ಪ

ಕಬ್ಬಿನ ಗಾಣಕ್ಕೆ ಕೈಕೊಡುವುದೂ ಸಮ, ಸಂಕಪ್ಪನ ಸ್ನೇಹ ಮಾಡುವುದೂ ಸಮ; ಹೀಗೆಂದು ನಮ್ಮೂರಲ್ಲಿ ಗಾದೆಯಾಗಿ ಬಿಟ್ಟಿದೆ. ಸಂಕಪ್ಪ ಜಾತಿಯಾರೆ ಗಾಣಿಗ. ಅವನದು ಕಬ್ಬಿನಗಾಣವೇನೂ ಅಲ್ಲ; ಆವನು ಬೆಲ್ಲ ಮಾಡಲು ಕಲಿತವನೂ ಅಲ್ಲ. ಅವನ ಹಿರಿಯರು, ಎಣ್ಣೆ ಗಾಣಹೂಡಿ ಜೀವನ ಮಾಡುತ್ತಿದ್ದರು. ಸಂಕಪ್ಪನ ಅಪ್ಪನಾಗಪ್ಪನಾಗಲಿ, ಸೋದರಮಾವ ತಿಮ್ಮಪ್ಪನಾಗಲಿ ಅದೇ ಕಸುಬಿನಲ್ಲಿ ಇದ್ದವರು. ನಾಗಪ್ಪ ತೀರಿಕೊಂಡು ಕಾಲ ಬಹಳವಾಯಿತು. ಆದರೆ ತಿಮ್ಮಪ್ಪ ಈಗಲೂ, ಮುದುಕನಾಗಿ ಮೂರೂವರೆ ಹಲ್ಲು ಮಾತ್ರ ಉಳಿದಿದ್ದರೂ, 'ಎಣ್ಣೆ ಮೇನಿಯುನಾಗಿಯೇ ಇದ್ದಾನೆ. ಹಿರಿಯರು ಮಾಡಿದ ಕಸುಬನ್ನು ಇವತ್ತಿಗೂ ನಡೆಯಿಸಿಕೊಂಡು ಬಂದಿದ್ದಾನೆ. ಮಿಲ್ ಎಣ್ಣೆ ಬಂದು ಅವನ 'ವ್ಯಾಪ್ತಿ' ಸ್ವಲ್ಪ ಕಷ್ಟವಾಗಿ ಕಂಡರೂ, ಎಂದಿನ ತನಕ ನಮ್ಮ ಊರಿನ ಹೆಂಗಸರಿಗೆ ಕಬ್ಬಿಣ ಗಾಣಗ ಕನರು ರುಚಿಸುವುದಿಲ್ಲವೋ, ಅಂದಿನ ತನಕವೂ ಮರದ ಗಾಣದ ಎಣ್ಣೆಗೆ ಗಿರಾಕಿ ಉಂಟೇ ಉಂಟು.

ಆದರೆ ಸಂಕಪ್ಪನ ವಹಿವಾಟೇ ಬೇರೆ. ಸಣ್ಣದಿರುವಾಗ ಅಪ್ಪನ ಗಾಣದಲ್ಲಿ ಅವನು ನಾಲ್ಕು ದಿವಸ ದುಡಿದವನು. ಆ ಮೇಲೆ ಅವನಿಗೆ ಅದು ಬೇಸರ ಬಂದಿತು. ಅಪ್ಪನಿಗೆ ಹೇಳಿ ಹೇಳಿ, ಎತ್ತನ್ನು ಗಾಣಕ್ಕೆ ಕಟ್ಟಿಸುವ ಸುಧಾರಣೆ ತಂದ. ಇದರಿಂದ ಆದ ಸುಧಾರಣೆಯೆಂದರೆ–ಅವನ ಮನೆಯ ಚಾವಡಿಯನ್ನು ಎತ್ತು ತುಳಿದು ಧೂಳು ಹೆಚ್ಚಿದ್ದೇ ಲಾಭ. ಗಾಣ ಚಾವಡಿಯಿಂದ ಇಳಿದು ಅಂಗಳಕ್ಕೆ ಬರಬೇಕಾಯಿತು. ತಿರುಗಿ ಮಳೆಗಾಲ ಬರುತ್ತಲೇ ಅದಕ್ಕೊಂದು ಕೊಗಳು ಕಟ್ಟಿಸಿದ, ಎತ್ತಿನ ಗಾಣ ಹಾಕಿ, ಸಿಕ್ಕುವ ಮುನಾಫೆ ಅರ್ಧಕ್ಕೆ ಇಳಿಯಿತೆಂದು ನಾಗಪ್ಪ ತನ್ನ ಸಮವಯಸ್ಸಿನವರಿಗೆ ಹೇಳುತ್ತಿದ್ದ. ಇತ್ತ ಆತ ತೀರಿಕೊಂಡಮೇಲೆ, ಸಂಕಪ್ಪನಿಗೆ ಕುಲದ ಕಸುಬೇ ಬೇಡವೆಂದು ತಲೆಗೆ ಹೋಯಿತು. ಯಾರೋ ಏನನ್ನೋ ಚುಚ್ಚಿದರು! "ಊರಿನಲ್ಲಿ ಇಷ್ಟೆಲ್ಲ ಬಂಡಸಾಲೆಗಳಿವೆ. ನಿನಗೊಂದು ಬಾಡಿಗೆಗೆ ಬರಗಾಲವೇ? ಎತ್ತುಹ್ಯಾಗೂ ಇವೆ. ಅವಕ್ಕೆ ಎರಡು ಗಾಲಿ ಸೇರಿಸು" ಎಂದರು. ಹೀಗಾಗಿ ಆತ ಸಾಲಮಾಡಿ ಒಂದು ಗಾಡಿಮಾಡಿದ. 'ಗಾಣದ ಸಂಕಪ್ಪ ಹೋಗಿ' 'ಗಾಡಿ ಸಂಕಪ್ಪ'ನಾವ

ಅದೇನು ಗಾಡಿ ನೊಗದ ಮಹಾತ್ಮೆಯೋ! ಸಂಕಪ್ಪ ನೊಗದ ಮೂಕಿ ಏರಿದ್ದೇ ತಡ, ಅವನ ರಂಗೇ ಬೇರೆಯಾಯಿತು. ಊರಿನಲ್ಲಿ ಯಾವ ಬಿಸಾತೂ ತನಗಿಲ್ಲ ಎಂಬ ಹಾಗೆ ವರ್ತಿಸತೊಡಗಿದ— "ನಿಮ್ಮ ಬಾಡಿಗೆಯಲ್ಲವಾದರೆ ಅವರದ್ದು; ಅವರದ್ದಲ್ಲವಾದರೆ ಬೇರೆ ಮತ್ತೊಬ್ಬರದ್ದು" ಎಂದು ಉಡಾಪಿ ಮಾತೇ ಹೊರತು, ಸಮಾಧಾನದ ಮಾತಿಲ್ಲ. ತಾನು ಯಾರು, ತನ್ನ ಠಾವು, ಠಿಕಾಣೆಯೇನು ಎಂಬುದು ಅವನಿಗೆ ತಿಳಿದ ಹಾಗೆಯೇ ಇಲ್ಲ. ಮೊಗೇರ ಅಣ್ಣುವನ್ನು ಕೇಳಬೇಕು, ಮೇನಿಯನ ವಿಚಾರವನ್ನು ತಿಳಿಯಲಿಕ್ಕೆ! "ನಮ್ಮ ಮೊಗೇರ ಮಕ್ಕಳನ್ನು ಮೂರಿಬಲೆ ದಿವಸ ಮಾತನಾಡಿಸಬಾರದು-ಅಷ್ಟೆ; ಆದರೆ ಈ ಮೇನಿಯನ ಮಾರಿಯನ್ನು ಇಡೀ ವರ್ಷವೂ ಮಾತನಾಡಿಸುವಹಾಗಿಲ್ಲ. ಅದಂತೇನೆ, ಗಾಡಿ ಮೂಕಿಯ ಪೌರೇ (Power) ಹಾಗೆ. ತನ್ನ ಗಾಡಿಯಲ್ಲಿ ತರುವುದು ಆಣೆಗುಡ್ಡೆಯ ಕಲ್ಲನ್ನಾದರೂ, ಅವನ ತಲೆಯೊಳಗೆ ಸರಕಾರದ ಇಸ್ಟಾರ್ಲೇ ಆ ಗಾಡಿಯಲ್ಲಿ ಹೋಗುತ್ತೆ ಎಂಬ ಹಮ್ಮು."

ಈಗೀಗ ಮೇನಿಯನ ಸವಾರಿ ಚನ್ನಪ್ಪ ಮಯ್ಯರ ತೈನಾತಿಯಾಗಿ ಬಿಟ್ಟಿದೆ. ಪಾಟಾಳಿ ಪರಮು ಹೇಳುವ ಹಾಗೆ "ನಾಗಯ್ಯ ಸೆಟ್ಟಿಗೊಬ್ಬ ಬಚ್ಚ; ಚನ್ನಪ್ಪ ಮಯ್ಯರಿಗೊಬ್ಬ ಸಂಕಪ್ಪ-ಸುಬ್ರಮಣ್ಯದ ಜೋಡಿ" ಎಂದು. ಗಾಡಿಯನ್ನು ಮೊನ್ನೆ ಮೊನ್ನೆ ಬದಲಾಯಿಸಿ, ಹಾಸನದಿಂದಲೇ ಒಂದು ಜತೆ ಎತ್ತು ತಂದಿದ್ದಾನೆ. "ಮುಂಚೆ ಇವನಿಗೇ ಗಂಜಿಗೆ ಠಿಕಾಣೆಯಿಲ್ಲ. ಈಗ ಈ ಎತ್ತುಗಳಿಗೆ ಏನು ಹಾಕುತ್ತಾನೆಯೋ" ಎಂದು ಊರವರು ವಿಸ್ಮಯಪಡುತ್ತಾರೆ. ಆದರೆ ಮೊನ್ನೆ ಅದರ ಗುಟ್ಟು ಹೊರಗೆ ಬಂದಿತು. ಇವನ ಎತ್ತನ್ನು ಕೊಟ್ಟು. ಮೇಲುವಾಸಿ ಕೊಟ್ಟು ಹಾಸನದ ಎತ್ತು ತಂದುದು ಅಲ್ಲವಂತೆ. ಮೇಲುವಾಸಿ ಕೊಡಲಿಕ್ಕೆ ಇವನ ಹತ್ತಿರ ಏನಿದೆ–ಜಿಡ್ಡು ಹಿಡಿದ ಜನಿವಾರವನ್ನು ಬಿಟ್ಟರೆ? ಇವನ ಗಾಡಿ ಸಾಲಕ್ಕೆ ಹೋಯಿತಂತೆ. ಇನ್ನು ಅದೊಂದು ಹುಡುಗ ಸಿಕ್ಕಿದ್ದಾನಲ್ಲ ಚನ್ನಮಯ್ಯ. ಅವನಿಗೆ ಈ 'ಅಟ್ರಾಕಣಿ'ಗಳೆಲ್ಲ ಸಾಟಿ. ಈ ಸಂಕಪ್ಪ-ಮೇನಿರಯನ ಸವಾರಿ, ಜವಳೆ ಗಂಟುಬಿದ್ದ ಹಾಗೆ ಗಂಟುಬಿದ್ದಿದೆ. ಅವರು ಜೋಡೆತ್ತಿನ ಗಾಡಿಯನ್ನು ಮಾಡಿಸಿದ್ದಾರೆ. ಅವರ ಲೆಕ್ಕಕ್ಕೆ ಇವನಿಗೊಂದು ಅಗ್ಗದ ಗಾಡಿ. ಊರಲ್ಲಿ ತಿರುಗುವುದಕ್ಕೆ ಯಾವ ಕರ್ಮಕ್ಕೆ ಗಾಡಿಯೋ! ಅಂತೂ ಇವನಿಗೆ ಬೆಳ್ಳಿ ಹಿಡಿಯ ಬಾರಕೋಲು ಬಂತು. ಚನ್ನಮಯ್ಯರ ಸಂಗಡ ಹೋಗುವಾಗ, ಅವರ ಬೆಳ್ಳಿ ಕಟ್ಟಿನ ಬೆತ್ತ ಏರುತ್ತದೆ. ಅವರ ಕಣ್ಣು ತಪ್ಪಿನ

ಗಳಿಗೆಗೆ, ಇವನ ಬೆಳ್ಳಿ ಹಿಡಿಯುಳ್ಳ ಬಾರಕೋಲು ಕೈಗೆ ಬರುತ್ತದೆ. ಗಾಡಿ ಎಲ್ಲೇನೆ ಇರಲಿ; ಇವನ ಕೈಯ್ಯಲ್ಲಿ ಬಾರಕೋಲಂತು ತಪ್ಪುವ ಹಾಗಿಲ್ಲ. ಮೇನಿಯನಿಗೆ ಅದು ರಾಜದಂಡ ಇದ್ದ ಹಾಗೆ."

ಯಾಕೆ ಮೇನಿಯನಿಗೆ ಚನ್ನಮಯ್ಯರು ಮರುಳಾಗಿದ್ದಾರೆಂದು ಕೇಳುತ್ತಿರೋ-ಅದರ ಸಂಪೂರ್ಣ ವಿವರ ನಮ್ಮ ಕೆರೆದಂಡೆ ನರಸಿಂಹ ಮಾಣಿಗೆ ಗೊತ್ತಿದೆ. ನರಸಿಂಹನಿಗೆ ಈ ಮೇನಿಯನನ್ನು ಕಂಡರೆ ಕಿಡಿಕಿಡಿ. "ನೋಡೋಣ, ಚನ್ನಮಯ್ಯನ ದುಡ್ಡಿನ ಹೆಮ್ಮೆ ಇವನಿಗಲ್ಲವೇ? ಚನ್ನಮಯ್ಯನ ಆಸ್ತಿ ಕರಗಿ ನೀರಾಗಲಿಕ್ಕೆ ಇನ್ನು ನಾಲ್ಕು ವರ್ಷಗಳೂ ಬೇಡ. ದೇವರ ದಯೆಯಿದ್ದರೆ-ಜನ್ನ ಪೈ, ತೇಜಪ್ಪ ಭಂಡಾರಿಗಳು ಸೇರಿ ಇವನಿಂದ ಆ ಬ್ಯಾಂಕು, ಈ ಬ್ಯಾಂಕು ಎಂದು ಜಾಮೀನು ಹಾಕಿಸಿ, ಎರಡು ವರ್ಷದಲ್ಲಿ ತಳ ಕಾಣಿಸುತ್ತಾರೆ. ನೀಲಪ್ಪ ಹೆಗ್ಡೆಯವರ ಕ್ರಿಮಿನಲ್ಲಿನಲ್ಲೇ ರೂ. ೩೦೦೦ ಆಯಿತು ಚಟ್ಟು!

"ಒಂದು ಸಾರಿ, ಅಪ್ಪ ಹೊಟ್ಟೆ ಕಟ್ಟಿಟ್ಟು ಮಾಡಿದ ಕಾಸು ಕಕ್ಕಿತೆಂದರೆ, ನಮ್ಮ ಹಾಗೆಯೇ ಚನ್ನಪ್ಪ. ನನ್ನ ಹಾಗೂ ಅಲ್ಲ....ನನಗೆ ನಾಲ್ಕು ಮುಡಿ ಅಕ್ಕಿಯಾದರೂ ಉಂಟು, ಹೆಂಡತಿಯ ಹೆಸರಲ್ಲಿ. ಇವನಿಗೆ ಅದೂ ಇಲ್ಲ. 'ಹೆಣ್ಣು ಕೊಡುತ್ತೇನೆ' ಎಂದವರು ಇವನ ದರ್ಬಾರಿಗೆ ಹೆದರಿ ಕಂಗಾಲಾದರು. ಮೊನ್ನೆ ಆ ಘಟ್ಟದ ಸಂಬಂಧ ಆಗುವುದರಲ್ಲಿತ್ತು. ನಾನೇ ಒಳಗಿನ ಸೂಟೆಲ್ಲ ಅವರಿಗೆ ಹೇಳಿ, ಬಂದವರನ್ನು ಊರಿಗೆ ಕಳುಹಿಸಿದೆ. ಪಾಪ ಅವರಿಗೇನು ಗೊತ್ತು? ಮಂಡಗದ್ದೆಯೋ, ಮುಸರುಗದ್ದೆಯೋ, ಅಲ್ಲಿಂದ ಓಡಿ ಬಂದು, ಮಗಳನ್ನು ಕೊಡುವ ಎಂದು ಯೋಚನೆ ಮಾಡಿದರು. ನಾನೆಂದೆ-'ಮಗಳನ್ನು ಕೊಡುವುದು ಸರಿಯೆ; ಮೂರೇ ಮೂರು ವರ್ಷ ತಾಳಿಕೊಳ್ಳಿ. ಆ ಮೇಲೆ ಅಳಿಯನ ಕೈಯಲ್ಲಿ ಕರಟದ ಚಿಪ್ಪು.... ಮತ್ತೆ ಸರಕಾರಿ ಆಸ್ಪತ್ರೆಯೇ ಗತಿ' ಎಂದು ಅವರೂ ಹೆದರಿ ಮಾರನೇ ದಿವಸವೇ ತಮ್ಮ ಊರನ್ನು ಸೇರಿದರು.

"ಆಯಿತೇ; ಸಂಗತಿ ಹೀಗಿರುತ್ತ ಈ ಮೇನಿಯ ಎಷ್ಟು ದಿವಸ ಮೆರೆದಾನು? ಇವನ ಗಾಡಿ ಲಗಾಡಿಯಾಗುವುದಿಲ್ಲವೇ? ನಾನು ನಾಗಯ್ಯ ಸೆಟ್ಟರನ್ನು ಹುರಿಕಾಯಿಸಿದ್ದೇನೆ. ನಾಗಯ್ಯ ಸೆಟ್ಟರೋ! ಪಾತಾಳಗರುಡ ಅವರು. ಈ ಚನ್ನಪ್ಪನ ಕುಲಗೋತ್ರ ಉದ್ಧಾರ ಮಾಡಲಿಕ್ಕೆ ಸಾಕು. ಅವರು ಸಮಯ ಕಾಯುತ್ತಿದ್ದಾರೆ. ಅವರಿಗೆ ಪುಟ್ಟತಂಗಿ ತಮ್ಮಿಂದ ಇವರ ಬಲೆಗೆ ಬಿದ್ದಳಲ್ಲ ಎಂಬ ಹೊಟ್ಟೆಸಂಕಟ ಇದೆ;ಅಂಥ ಇಂಥಾ ಉರಿಯಲ್ಲ. ಏನಾದರೂ

ನೆಪ ಇಲ್ಲದ ನೆಪ ಹುಡುಕಿ, ಇವರನ್ನು ಹಿಡಿದು ಕಾಯಿಸದೇ ಇರುವುದಿಲ್ಲ ಅವರು. ಆ ಸಮಯದಲ್ಲಿ ಈ ಗಾಣಿಗನ ಎಲುಬುಬಿಡದ ಹಾಗೆ ದಬಾಯಿಸು –ಎಂದು ಬಚ್ಚನ ಬಾಲ ಗೀಸಿಬಿಟ್ಟಿದ್ದೇನೆ!"

ಕೆರೆಕಟ್ಟೆ ನರಸಿಂಹನಿಗೆ ಈ ಗಾಣಿಗ ಸಂಕಪ್ಪನ ಮೇಲೆ ಯಾಕೆ ಇಷ್ಟು ಸಿಟ್ಟೋ ನನಗೆ ಬೇರೆ ತಿಳಿಯದು. ಸಂಕಪ್ಪನ ಹೆಸರನ್ನು ಕೇಳಿದರೇ ಅವನ ಕಣ್ಣಲ್ಲಿ ಕೆಂಪು ಅಡರುತ್ತದೆ. ಅದು ಬರಿಯ ಸಿಟ್ಟು ಅಲ್ಲ. ಒಳ್ಳೆಯ ದ್ವೇಷವೇ ಅವನಿಗಿರಬೇಕು. ಮೊದಲಿನ ದಿವಸಗಳಾಗಿದ್ದರೆ ನರಸಿಂಹನೂ ಒಂದು ಕೈ ನೋಡುತ್ತಿದ್ದ. ಆದರೆ ಒಂದೆರಡು ಹಾಳು ಸಿವಿಲ್ಲಿಗೆ ಸಿಕ್ಕಿ, ಆಸ್ತಿಯ ಅರ್ಧ ಹೋಯಿತು. ಉಳಿದುದು ಹೆಂಡತಿ ಮನೆಯದು. ಅದು ಹೆಂಡತಿ ಹೆಸರಿಗೆ ಇರುವುದರಿಂದ–ಇವನು ಮುಟ್ಟುವ ಹಾಗಿಲ್ಲ. ಅಲ್ಲದೆ ಕೈಸುಟ್ಟುಕೊಂಡ ಮಗುವಿನ ಹಾಗೆ, ಕಳೆದುಕೊಳ್ಳುವ ವಹಿವಾಟಿಗೆ ಈಗ ಹೋಗಕೂಡದು–ಎಂಬ ಬುದ್ಧಿಯೂ ಬಂದಿದೆ. ಆದರೆ ಅವನ ವೈರದ ನೆಲೆಯೇನು ಎಂಬ ವಿಚಾರ ತಿಳಿಯುವ ಆತುರ ನನಗಾಯಿತು.

ಮೊನ್ನೆ ಶ್ಯಾನುಭಾಗ ಭವಾನಿರಾಯರು–ಹರಹರ–ಎಂದು ಭೇಟಿ ಯಾದರು. ಅವರೀಗ ಮಾಗಣೆ ಶ್ಯಾನುಭಾಗರಲ್ಲವೇ! ಬಿಡಾರ ಕುಂದಾಪುರ ದಲ್ಲಿ; ಗ್ರಾಮ ನಮ್ಮದು. ತಹಶೀಲ್ದಾರರು, ಮಣೆಗಾರರು ಗ್ರಾಮಕ್ಕೆ ಬರುವ ಸುದ್ದಿ ತಾಲೂಕು ಕಚೇರಿಯಿಂದಲೇ ಹೊರಡುತ್ತದೆ. ಆ ದಿವಸ ಸೈಕಲು ಹತ್ತಿ ಫೇರಿ ಬಿಟ್ಟಹಾಯಿತು. ಹೆಸರಿಗೆ, ಗ್ರಾಮದಲ್ಲಿ ಅವರಿಗೊಂದು ಬಿಡಾರವಿದೆ. ಬಿಡಾರಕ್ಕೆ ಬಂದರೆ, ಕೈ ಅಡುಗೆಯಾಗಬೇಕು. ಮೊನ್ನೆ ಹೊತ್ತು ಕಂತುವಾಗ ನಮ್ಮ ಗುಡ್ಡೆ ಮುಳ್ಳು ಮೆಟ್ಟಿ ಅವರ ಸೈಕಲು ಪಂಚರು ಆಯಿತು. ನಾನು ಆ ಹಾದಿಯಾಗಿ ಬರುವವನು ಎದುರಾದೆ. "ಹೌದಯ್ಯ....ವ್ಯಾಪಾರ ಹೈಲಾ ಯಿತಲ್ಲ; ಸೈಕಲು ಪಂಚರಾಯಿತು. ಕತ್ತಲಾಗುತ್ತಲೂ ಬಂದಿತು. ಸೈಕಲು ರಿಪೇರಿ ನನಗೆ ಬರುವುದಿಲ್ಲ; ಪಂಚರ್ ಸಾಮಾನು ಕುಂದಾಪುರದಲ್ಲಿ ಉಳಿ ಯಿತು" ಎಂದರು. "ನಮ್ಮ ಕೆರೆಕಟ್ಟೆ ನರಸಿಂಹನನ್ನು ಹಿಡಿಯಬೇಕು. ಸಾಮಾನ್ಯ ಸೈಕಲಲ್ಲ, ಮೋಟಾರು ರಿಪೇರಿ ಮಾಡಿಯಾನು. ಅವನಿಗೆ ಬಾರದ ವಿದ್ಯೆಯಿಲ್ಲ" ಎಂದೆ. ಭವಾನಿರಾಯರ ಕುದುರೆಯನ್ನು ಹೊರಡಿಸಿಕೊಂಡು ಕೆರೆಕಟ್ಟೆ ಮನೆಗೆ ಹೊರಟೆವು. ಎರಡು ಮೈಲು ಹಾದಿಯನ್ನು ತಳ್ಳಬೇಕಿತ್ತು. ಮಾತನಾಡುತ್ತ ಬಂದೆವು. ಕೊನೆಗೆ ನರಸಿಂಹಯ್ಯನ ಸುದ್ದಿಯೂ ಬಂದಿತು.

ಆಗ ನಾನು "ಹೌದಾ. ಶ್ಯಾನುಭಾಗರೇ, ಈ ನರಸಿಂಹಯ್ಯನ ಸಿಟ್ಟು ಆ ಗಾಣದ ಸಂಕಪ್ಪನ ಮೇಲೆ ಯಾಕೆ?" ಎಂದು ಕೇಳಿದೆ. ಅವರೋ? ಮಾಗಣೆ ಶ್ಯಾನು ಭಾಗರು! ಖುದ್ದು ಗ್ರಾಮದಲ್ಲಿ ಇಲ್ಲದಿದ್ದರೂ, ಪ್ರತಿ ಕಾಸರಕನ ಕುತ್ತಿಯು ಬೇರೆಲ್ಲವೂ ಅವರಿಗೆ ಗೊತ್ತು. ಹೇಳಿದರು! "ಅದನ್ನು ಏನು ಹೇಳುವುದು ಮಹಾರಾಯ? ನಮ್ಮ ಕಾಲದಲ್ಲಿ ಇಂಥದೆಲ್ಲಾ ಇರಲಿಲ್ಲ. ಈ ಮೇನಿಯನ ಒಂದು ಹೆಣ್ಣಲ್ಲವೇ? ಅದು ಅವನ ಮನೆಗೆ ಬಂದಿದೆ. ಕೇಳಿದರೆ. ತನ್ನ ಅಕ್ಕನದೋ ತಂಗಿಯದೋ ಮಗಳು—ಎನ್ನುತ್ತಾನೆ. ತತ್ಕಾಲಕ್ಕೆ ಒಬ್ಬಳೇ ರತಿಯಲ್ಲವೇ ಅವಳು-ಬಣ್ಣವೊಂದನ್ನು ಬಿಟ್ಟರೆ! ಅವಳ ಕೀರ್ತಿ ಬಹಳ ಇರಬೇಕು. ಅಂತು ಮದುವೆಯಾದ ಬಾಬತ್ತು ಅದಲ್ಲ. ಅದು ನಮ್ಮ ನರಸಿಂಹಯ್ಯನ ನದರಿಗೆ ಬಿತ್ತು; ಅಥವಾ ಮೊದಲಿಂದಲೂ ಇವರೊಳಗೆ ಒಳ್ಳೆಯದಿತ್ತೋ ನನಗೆ ತಿಳಿಯದು. ಅಂತು ಚಿಕ್ಕ ಮಯ್ಯಗು ತೀರುವ ತನಕ, ಒಳಗಿಂದೊಳಗೇ ಅವರಲ್ಲಿ ಸ್ನೇಹವಿತ್ತು. ಮೇನಿಯನಿಗೆ ಸಿಗರೇಟು ಬೀಡಿಗಳಿಗೆ ಕಾಸನ್ನು ನರಸಿಂಹಯ್ಯ ಕೊಡುತ್ತಿದ್ದ.

"ಆದರೆ ಚನ್ನಪ್ಪಯ್ಯನಿಗೆ ಪಟ್ಟವಾದ್ದೇ ತಡ, ಬಲವಾದ ಗೋಳಿ ಮರದ ನೆರಳು ಸೇರುವ ಎಂದು ಅವರ ಹಿಂದೆ ತಿರುಗಾಡಲು ಸುರುಮಾಡಿದ. ಗುರೂಪದೇಶ ಈ ನೀಲುವಿನಿಂದ ಕೊಡಿಸಿದ. ನೀಲು ನರಸಿಂಹಯ್ಯನಿಂದ ತಪ್ಪಿ, ದೊಡ್ಡ ಸರಕನ್ನು ಸೇರಿದಳು. ಆ ಚನ್ನಪ್ಪನಿಗೆ ನೀಲು, ಪುಟ್ಟರಂಗಿ ಎಂದು ಎಷ್ಟೆಷ್ಟೆಲ್ಲಾ ಉಂಟೋ! ಎಲ್ಲ ಕೆಡುಗಾಲ. ಅಂತು ನರಸಿಂಹಯ್ಯನಿಗೆ-ಕೈಗೆ ಬಂದ ತುತ್ತನ್ನು ತಪ್ಪಿಸಿದನಲ್ಲಾ ಈ ಸಂಕಪ್ಪ—ಎಂಬ ಸಿಟ್ಟಿದೆ.

"ಆ ಮೇಲೆಯೂ ನೀಲುವನ್ನು ಹಾರಿಸಲಿಕ್ಕೆ ಬಹಳ ಯತ್ನಮಾಡಿದ ನರಸಿಂಹಯ್ಯ. ಅದು ನೀಲು ಅಲ್ಲವೇ? ಗೆಜ್ಜೆ ಕಟ್ಟುವವರಿಗಿಂತ ಒಂದು ಬಣ್ಣ ಮೇಲು ಅವಳು. ಇವನ ಬಲೆಗೆ ಬೀಳಲೇ ಇಲ್ಲ. ನರಸಿಂಹನಿಗೆ ನಿಜಕ್ಕೂ ಅವಳೆಂದರೆ ಪ್ರಾಣವಾಗಿತ್ತು....ಸಾಕು, ಸುದ್ದಿ ಬಿಡಿ; ಕೆರೆಕಟ್ಟೆ ಬಂದಿತು. ನರಸಿಂಹಯ್ಯ ಕೇಳಿದರೆ ನಮ್ಮ ಪಂಛೇರು ಧಡೆಯಾದೀತು."



## ೧೧. ಶ್ಯಾನುಭೋಗ ಭವಾನಿರಾಯರು

ಭವಾನಿರಾಯರ ಹುಟ್ಟು ಊರು ಹಟ್ಟಿಕುದುರು. ಅವರ ಕುಟುಂಬ ದವರು ಅಲ್ಲಿ ಯಾರೂ ಇಲ್ಲ. ಮೂವರು ತಮ್ಮಂದಿರು ಮುಂಬಯಿಯಲ್ಲಿ ಇದ್ದಾರೆ. ಭವಾನಿರಾಯರ ಒತ್ತಿನವರು ಆರ್. ಎಸ್. ಹಟ್ಟಿಕುದುರು, ಅನಂತರ ಬಿ. ಎಸ್, ಹಟ್ಟಿಕುದುರು; ಆ ಬಳಿಕ ಟಿ. ಎಸ್. ಹಟ್ಟಿಕುದುರು. ಹಟ್ಟಿಕುದುರು ಶಿವಶಂಕರರಾಯರ ಹಿರೇ ಮಗಂದಿರಾದ ಇವರು, ಬರಿಯ ಭವಾನಿರಾಯರಾಗಿಯೇ ಉಳಿದಿದ್ದಾರೆ. ಅವರಿಗೆ ನಮ್ಮ ಗ್ರಾಮದ ಮಾಗಣೆ ಶ್ಯಾನುಭೋಗಿಕೆ ಇದೆ. ಭವಾನಿರಾಯರ ಮನೆತನ ಜನ್ನ ಪೈಗಳು ಹೇಳುವ ಹಾಗೆ 'ಶಣಪಂಚೆ'. ಅವರಿಗಿದ್ದ ಹಟ್ಟಿಕುದುರು ಗ್ರಾಮದ ಶ್ಯಾನುಭೋಗಿಕೆ ಎಂದೋ ಹೋಗಿತ್ತು. ಈಗ ಅಲ್ಲಿ ಅವರ ಮನೆಯೂ ಇಲ್ಲ. ಭವಾನಿರಾಯ ರಿಗೆ ತಮ್ಮ ಹಿರಿಯರಿಂದ ಬಂದ ಶ್ಯಾನುಭೋಗಿಕೆ ಕಸುಬಿನ ಮೇಲೆ ತುಂಬ ಅಭಿಮಾನವಾದುದರಿಂದ, ಆ ವೃತ್ತಿ ಬಿಡಬಾರದೆಂದು ಹೇಗೋ ಹೇಗೋ ಸ್ನೇಹದಿಂದ ನಮ್ಮೂರಿನ ಶ್ಯಾನುಭೋಗಿಕೆ ಹಕ್ಕನ್ನು ಕ್ರಯಕ್ಕೆ ಪಡೆದು ಕೊಂಡರು. ಸುಮ್ಮನೆ ಅಲ್ಲ, ಅವರೇ ಅನ್ನುವಂತೆ 'ನಗದಿಯಿಂದ ರೂಪಾಯಿ ಐನೂರು ಠಣಠಣ ಸುರಿದು'. ದೇವಪ್ಪಯ್ಯನ ಮಗನಿಂದ ಅವರ ಹಕ್ಕನ್ನು ಬರೆಯಿಸಿಕೊಂಡರು. ಅವನು-ದೇವಪ್ಪಯ್ಯನ ಮಗ! ಐನೂರು ರೂಪಾಯಿ ಎಂದೊಡನೇ ಬಾಯಿನೀರು ಬಂದು ಹಕ್ಕನ್ನು ಮಾರಿಯೂ ಬಿಟ್ಟ. ಹಣ ತೆಗೆದುಕೊಂಡ ಮೂರು ತಿಂಗಳಲ್ಲಿ ಅದನ್ನು ದಕ್ಕಿಸಿ ಮಣ್ಣುಗೂಡಿಸಿಯೂ ಆಯಿತು.

ಭವಾನಿರಾಯರಿಗೆ ಹಾಗೂ ಹೀಗೂ ಜೀವನಕ್ಕೆ ಸರಾಗವಾದ ದಾರಿ ಯೊಂದು ಸಿಕ್ಕಿತು. ಕುಂದಾಪುರದಲ್ಲಿ ಅವರ ಠಾವುಠಿಕಾಣೆ. ಅಂದರೆ ಸಹಜ ವಾಗಿ ಅವರ ಮನೆಯವರಿಗೆ ಹಳ್ಳಿಯ ಹವೆ ಹಿಡಿಯುವುದಿಲ್ಲ. ಎಲ್ಲರೂ ಸಿಟಿ, ಶಹರುಗಳಲ್ಲಿದ್ದವರು. ಅವರಿಗೆ ಹಟ್ಟಿಕುದುರಿನಲ್ಲಿ ಮನೆಯಿದ್ದಾಗಲೂ ಸಹ, ತಮ್ಮಂದಿರು ಮುಂಬಯಿಯಿಂದ ಬಂದರೆ, ಒಂದೇ ಒಂದು ದಿನ ಕಳೆ ಯುವುದು ಸಾಧ್ಯವಾಗುತ್ತಿದ್ದಿಲ್ಲ. ಅದಕ್ಕೆಂದೇ—ಶ್ಯಾನುಭೋಗಿಕೆ ಇರುವ ಗ್ರಾಮ ಹಳ್ಳಿಯಾದುದರಿಂದ ಕುಂದಾಪುರದಲ್ಲಿ ಮನೆ ಹೂಡಿದ್ದಾರೆ. ಆ

ಮೇಲೆ ಅವರು ಹೇಳುವುದುಂಟು:—

"ಒಬ್ಬ ತಮ್ಮನಿಗೆ ತಿಂಗಳಿಗೆ ರೂ. ೧೦೦ ಇದೆ; ಇನ್ನೊಬ್ಬನಿಗೆ ೩೦೦; ಮತ್ತೊಬ್ಬನಿಗೆ ಥಾಮಸ್ ಕುಕ್ಕಿನಲ್ಲಿ ೧೫೦ ಬರುತ್ತದೆ. ದೇವರ ದಯೆಯಿಂದ ನಮಗೇನೇನೂ ಕಡಿಮೆಯಿಲ್ಲ. ನಮ್ಮ ಅಮ್ಮನೂ ಮುಂಬಯಿಯಲ್ಲಿದ್ದಾಳೆ. ತಮ್ಮಂದಿರಿಂದ ವಾರಕ್ಕೆ ಆರು ಕಾಗದ ಬರುತ್ತದೆ 'ಬಾ, ಬಾ, ನಮ್ಮ ಜತೆಯಲ್ಲಿರು' ಎಂದು. 'ನಿನ್ನೊಬ್ಬನ ಸಂಸಾರ ನೋಡಿಕೊಳ್ಳುವ ಶಕ್ತಿಯಿಲ್ಲವೇ ನಮಗೆ' ಎನ್ನುತ್ತಾರೆ ಅವರು.

ಹೀಗಾಗಿ ಸಾಯುವ ಸಮಯಕ್ಕಾದರೂ ಸಾಂಟಾಕ್ರೂಸಿಗೆ ಹೋಗಿ ಅಲ್ಲಿರಬೇಕು ಎಂಬುದು ಭವಾನಿರಾಯರ ಹಂಬಲ. ಆದರೆ, ಅಲ್ಲಿಯ ತನಕ ಅವರು ಮುಂಬಯಿಯಲ್ಲಿದ್ದು ಏನು ಮಾಡಬೇಕು? ತಮ್ಮಂದಿರ ಹಾಗೆ ಇವರಿಗೆ ಹೆಚ್ಚಿನ ಇಂಗ್ಲಿಷ್ ಆಗಿಲ್ಲ. ಏನೋ ಗ್ರಹಚಾರ ಕೆಟ್ಟು ಸೆಕೆಂಡ್ ಫಾರ್ಮಿನಲ್ಲಿಯೇ ಶಾಲೆ ಬಿಟ್ಟರು, ತಮ್ಮಂದಿರು ಮಾತ್ರ ಪಾಸಾಗಿ ಮುಂದೆ ಗಟ್ಟಿಯಾದ ಸ್ಥಳಗಳನ್ನು ಸೇರಿಕೊಂಡರು.

ಭವಾನಿರಾಯರಿಗೆ ಮದುವೆಯಾಗಿ ಇಪ್ಪತ್ತು ವರ್ಷಗಳಾದುವು. ಎಂಟು ಜನ ಮಕ್ಕಳು ಇದ್ದಾರೆ. ಸರಿಯಾಗಿ ಎರಡೆರಡು ವರ್ಷಗಳ ಅಂತರ. ಹಿರಿಯ ಮಗ ಈ ವರ್ಷ ಮೆಟ್ರಿಕ್ಕಿಗೆ ಕುಳಿತಿದ್ದಾನೆ. ಕುಂದಾಪುರದಲ್ಲಿದ್ದರೆ ಶಾಲೆಗೆ ಅನುಕೂಲ. ಶ್ಯಾನುಭೋಗಿಕೆಯಿಂದಲೇ ಅವರ ದಿನ ನಡೆಯುವ ಹಾಗಿಲ್ಲ. ಒಬ್ಬೊಬ್ಬ ತಮ್ಮನೂ ಪ್ರತಿ ತಿಂಗಳಲ್ಲೂ ಅವರಿಗೆ ಹತ್ತು, ಹತ್ತು ರೂಪಾಯಿಗಳಂತೆ ಕಳುಹಿಸುತಿದ್ದಾನೆ

ಭವಾನಿರಾಯರು ತಮ್ಮಂದಿರಂತೆ ಶೋಕಿಯ ಜನವಲ್ಲ. ಅವರದ್ದು ಧಾರೇಶ್ವರ ಗಣೇಶಯ್ಯ, ಮುರ್ಡೇಶ್ವರ ಮಂಗೇಶಯ್ಯನವರಂತಹ ಮರ್ಜಿ; ಮನೆಯಲ್ಲಿ ಬರಿ ಪಂಚೆಯಲ್ಲಿ ಇರುತ್ತಾರೆ. ಶರ್ಟುಗಿರ್ಟು ಗ್ರಾಮಕ್ಕೆ ಹೋಗುವಾಗ ಮಾತ್ರ. ಕೋಟು, ಶರ್ಟುಗಳು ಇಲ್ಲ ಅನ್ನುವಂತಿಲ್ಲ; ರಾಶಿಗಟ್ಟಲೆ ಉಂಟು. ತಮ್ಮಂದಿರು ಬಂದಾಗಲೆಲ್ಲ 'ಅಣ್ಣ, ಘೇ' ಎಂದು ಕೋಟು, ಕೋಟಿನ ಬಟ್ಟೆಗಳನ್ನು ಎಸೆದು ಹೋಗುತ್ತಾರೆ. ಆದರೆ ಅವೆಲ್ಲ ಕುಂದಾಪುರ ಪೇಟೆಯಲ್ಲಿದ್ದವರಿಗೇ ಹೆಚ್ಚೆಂದು ಕಾಣಿಸುವಾಗ, ಗ್ರಾಮಕ್ಕೆ ಹಾಕಿಕೊಂಡು ಹೋದರೆ, ಮಣೆಗಾರರಿಗೆ ನಾಚಿಕೆಯಾದೀತು! ರಾಯರ ಕ್ರಮ, ಮರ್ಜಿಗಳು ಹಳೆಯವು. ಊಟದ ಮಟ್ಟಿಗೆ ಹಟ್ಟಿಕುದುರಿನಿಂದ ಮೂವತ್ತು ಮುಡಿ ಅಕ್ಕಿ,

ಮುನ್ನೂರು ತೆಂಗಿನಕಾಯಿಗಳೂ ಬರುತ್ತವೆ. ಮತ್ತೇನು ಬೇಕು? ತರಕಾರಿ, ತುಪ್ಪ, ಕಟ್ಟಿಗೆ-ಇಷ್ಟೇ ಅಲ್ಲವೆ? "ಅವನ್ನೆಲ್ಲ ಶ್ಯಾನುಭಾಗರಾದವರು ಕ್ರಯಕ್ಕೆ ಕೊಂಡು ಪೂರೈಸೀತೆ" ಎಂಬುದಾಗಿ ಭವಾನಿರಾಯರೇ ಹೇಳುತ್ತಾರೆ. ಇವತ್ತು 'ರಂದಯಿಗೆ' ತರಕಾರಿ ಇಲ್ಲ ಎಂದರೆ, ಉಗ್ರಾಣಿ ರಾಮು ಎಲ್ಲಿಂದಾದರೂ ತಲಾಸುಮಾಡಿ ೨೦೦ ತೊಂಡೆಕಾಯಿ ಗಳಿಸಿ, ಅದರಲ್ಲಿ ೧೫೦ನ್ನು ಶ್ಯಾನು ಭಾಗರ ಮನೆಗೂ, ೫೦ನ್ನು ತನ್ನ ಮನೆಗೂ ಮುಟ್ಟಿಸುತ್ತಾನೆ. ಕೆಲವು ಸಾರಿ ಅವಸರದಲ್ಲಿ, ಆ ಲೆಕ್ಕ ತಬ್ದಿಲ್ ಆಗುವುದೂ ಉಂಟು. ಫೆಬ್ರುವರಿ ತಿಂಗಳು ಬಂದರೆ-ಎಪ್ರಿಲಿನ ಅಂತ್ಯದ ತನಕ, ಎಲ್ಲಿ ಏನೇ ಆದರೂ, ಅವರ ಮನೆಯಲ್ಲಿ ಗೇರು ಬೀಜ, ತೊಂಡೆಕಾಯಿಯ ಉಪಕರಿಗಳು ತಪ್ಪುವಂತಿಲ್ಲ. ಮಳೆಗಾಲ ಮುಗಿಯುವ ತನಕ ಸೌತೇಕಾಯಿ, ಹುಳಿ ಮಾವಿನಹಣ್ಣು, ಕೆಸವೆ, ಅಂಥಾದ್ದು ಇಂಥಾದ್ದು ಎಂದು ಒಂದಲ್ಲ ಒಂದು ಬಂದೇ ಬರುತ್ತದೆ. ಗ್ರಾಮದ ಶ್ಯಾನು ಭಾಗರು ಎಂದ ಮೇಲೆ ಊರವರಿಗೂ ಅವರ ಹಂಗಿದೆ. ಒಂದಲ್ಲ ಒಂದು ಕೆಲಸ ಆಗಬೇಡವೇ?

ವಾರದಲ್ಲಿ ಎರಡು ದಿವಸ, ಕಾಯಂ ಎನ್ನುವಷ್ಟು, ಅವರ ಮೊಕ್ಕಾಂ ಗ್ರಾಮದಲ್ಲಿ. ಶ್ಯಾನುಭೋಗಿಕೆಯ ಬಗ್ಗೆ ಎಂತಲೇ ಅಲ್ಲ, 'ಅಲಾಯದ' ಕೆಲಸ ಗಳ ಬಗ್ಗೆ. ಭವಾನಿರಾಯರ ಒಕ್ಕಣೆಯೆಂದರೆ ಸೀತಾಮ್ಮನವರ ಮುಂದೆ ಲಕ್ಷ್ಮಣ ದೇವರು ಮೂರು ಗೆರೆ ಬರೆದಷ್ಟು ಭದ್ರ. ತಮ್ಮಿಂದಾಗಿ ಜನಗಳ ಅದೃಷ್ಟ ಕೆಡಬೇಕಲ್ಲದೆ, ಶ್ಯಾನುಭಾಗರ ಒಕ್ಕಣೆಯಿಂದಲ್ಲ.

ನಾಗಯ್ಯ ಸೆಟ್ಟಿ ಏನು ಬರಹವನ್ನೂ ಬರೆಸುವುದಿರಲಿ, ಅದನ್ನು ಭವಾನಿ ರಾಯರಿಗೆ ತೋರಿಸಿಯೇ ಮುಂದುವರಿಸಬೇಕು. ಅವರು ಗ್ರಾಮದಲ್ಲಿದ್ದರೆ ಅವರಿಂದಲೇ ಹೇಳಿಸಿ, ಬರೆಯಿಸುತ್ತಾನೆ. ಬರವಣಿಗೆಯಷ್ಟೇ ಬಲ ಶ್ಯಾನು ಭಾಗರ ಆಲೋಚನೆ. ಸಿವಿಲ್ ಆಯಿತೇ-"ಇಗೊಳ್ಳಿ, ತ್ರಾಸಿ ಅಣ್ಣಪ್ಪಯ್ಯನಿಗೆ ಕೊಡಿ;" ಕ್ರಿಮಿನಲ್ ಆಯಿತೇ, "ತಗ್ಗರ್ಸೆ ನಾರಾಯಣರಾಯರಿಗೆ ವಕಾಲತು ಕೊಡಿ" ಎಂದುಬಿಡುತ್ತಾರೆ. ಯಾಕೆ! ಈ ಇಬ್ಬರಿಗೂ ಬರುವ ವಕಾಲತಿನ ಮುಕ್ಕಾಲು ಮೂರು ವೀಸ ಕಕ್ಷಿಗಳು ಭವಾನಿರಾಯರ 'ಮಾರಿಫತ್ತಿ'ನಿಂದಲೇ ಬರುವಂಥವು.

ಭವಾನಿರಾಯರ ವಿಚಾರದಲ್ಲಿ ಊರವರೆಲ್ಲರಿಗೂ ಅಭಿಮಾನ. ಎಲ್ಲರೂ ಎಂದರೆ,'ಭರಾಮಿನ ಜನರೆಲ್ಲರಿಗೂ ಎಂದು. ಅವರ ಎದುರಿನ 'ನಂಬರ್‌ವನ್'

ಜನ ಎಂದರೆ ನಸ್ರಾಣಿ ಸುಬ್ಬಭಟ್ಟ. ಅವನಿಗೆ 'ನಸ್ರಾಣಿ' ಎಂಬ ಹೆಸರು ಬಂದುದೇ ಭವಾನಿರಾಯರ ದೆಸೆಯಿಂದ. ಆವರ ಮನೆ ಹೆಸರು ಸಾಮ್ರಾಣಿ ಸುಬ್ಬರಾಯ ಭಟ್ಟರ ಮನೆಯೆಂದು. ಸುಬ್ರಾಯರ ಮುಚ್ಚಿಗೆ ಮನೆ ಒಂದು ದಿವಸ ಗ್ರಾಮದವರ ಹಗೆಗೆ ತುತ್ತಾಯಿತು. ಬೆಂಕಿಯನ್ನೆಷ್ಟು ತಪ್ಪಿಸಿದರೂ ಒಂದು ಬಚ್ಚಲಿಗಾಗುವಷ್ಟು ಸಾಮಗ್ರಿ ಉಳಿಯಲಿಲ್ಲ. ಮಳೆಗಾಲ ಸಮೀಪಿಸಿತ್ತು. ಎಲ್ಲೆಲ್ಲೂ ತಿರುಗಾಡಲಿಕ್ಕೆ ತೊಡಗಿದ. "ರವೆನ್ಯೂ ಸ್ಥಳದಿಂದ ಎರಡೇ ಎರಡು ಮತ್ತಿಮರ ಕೊಡಿಸಿರಿ" ಎಂದು ಬೇಡಿದ. "ಆಯಿತು, ನೋಡುವ -ನೀವು ಅರ್ಜಿ ಮಾಡಿ" ಎಂದರು ಭವಾನಿರಾಯರು. ಅವರ ಹೇಳಿಕೆಯಂತೆ ಅರ್ಜಿ ಬರಾಯಿಸಿ, ಅವರ ಮೂಲಕವೇ ತಹಶಿಲ್ದಾರರಿಗೆ ಕಳುಹಿಸಿದ.

ತಾನು ಇಷ್ಟು ಸ್ವಲ್ಪ ಕೆಲಸಕ್ಕೆ, ಅವರಿಗೆ ಐದು ರೂಪಾಯಿ ಕೊಟ್ಟಿದ್ದೇನೆ ಎಂಬುದಾಗಿ ಸುಬ್ರಾಯ ಭಟ್ಟನ ಹೇಳಿಕೆಯಿದೆ. "ಐದು ರೂಪಾಯಿ ಕೊಟ್ಟರೆ, ಸುಬ್ರಾಯನ ತಲೆಯೇ ತಿರುಗೀತು" ಎಂದು ಊರವರ ಹೇಳಿಕೆ. ಪ್ರಾಯಶಃ "ಕೊಡುತ್ತೇನೆ" ಎಂದದ್ದು ನಿಜವಿರಬೇಕು.

ಅನಂತರ ಶ್ಯಾನುಭಾಗರು ಊರಿಗೆ ಬಂದಾಗಲೆಲ್ಲ "ಏನು, ಅರ್ಜಿ ತನಿಖೆಗೆ ಬಂದಿತೇ? ಮಣೆಗಾರರು ಯಾವಾಗ ಬರುತ್ತಾರೆ?" ಎಂದು ಜೀವ ತಿನ್ನಲು ತೊಡಗಿದ. ಏಪ್ರಿಲು ತಿಂಗಳು ಸರಿದಾಯಿತು. ಅರ್ಜಿ ಹಾಕಿ ಮೂರು ತಿಂಗಳಾದರೂ ಯಾವ ಸುದ್ದಿಯೂ ಇಲ್ಲ. ಆದರ ಮೇಲೆ ಆರು ಸಾರಿ ಮಣೆಗಾರರು ಗ್ರಾಮಕ್ಕೆ ಬಂದು ಹೋದರು. ಆ ಬಳಿಕ ಸುಬ್ರಾಯ ಭಟ್ಟನೇ ಧೈರ್ಯಮಾಡಿ ಒಂದು ದಿವಸ ಮಣೆಗಾರ ಕಿಸ್ತು ಸೋಜರನ್ನು ಕಂಡು. ಸಲಾಂ ಮಾಡಿ, "ನನ್ನ ಅರ್ಜಿಗೆ ಏನು ಹುಕುಂ ಮಾಡಿಸುತ್ತೀರಿ?" ಎಂದು ಕೇಳಿದನಂತೆ. ಸೋಜರು "ಯಾವ ಅರ್ಜಿ, ನನ್ನ ಹತ್ತಿ ಬರಲೇ ಇಲ್ಲವಲ್ಲ?" ಎಂದರಂತೆ. ಸರಿ, ಸುಬ್ರಾಯ ಭಟ್ಟನಿಗೆ ದಿಗಿಲು ಹಾರಿತು. 'ಶ್ಯಾನುಭಾಗರ ಠಕ್ಕೇ!' ಎಂದು ಅವರ ಮೇಲೆ ಹಟತೊಟ್ಟ. "ಅವರಿಗೆ ಮದುವೆ ಮಾಡಿಸುತ್ತೇನೆ"ಎಂದು ಛಲತೊಡಗಿ,"ಯಾವುದೋ ಒಂದು ದರ್ಖಾಸ್ತಿನಲ್ಲಿ ಯಾರೋ ಒಬ್ಬರಿಂದ ಲಂಚ ತಿಂದರೆಂದು" ತಳ್ಳಿ ಅರ್ಜಿಯನ್ನು ಕಲೆಕ್ಟರರಿಗೆ ಹಾಕಿದ. ತಳ್ಳಿ ಅರ್ಜಿ ಇಂಥವರದ್ದೆಂದು ಶ್ಯಾನುಭಾಗರಿಗೆ ತಿಳಿಯಿತು. "ಈ ನಸ್ರಾಣಿ ಸುಬ್ಬನ ತಲೆ ಹಾರಿಸುತ್ತೇನೆ" ಎಂದು ಅವರೂ ಹಟತೊಟ್ಟರು. ಸುಬ್ರಾಯನಿಗೆ ಅಂದಿನಿಂದ 'ಸಾಮ್ರಾಣಿ' ಎಂದಿದ್ದ ಹೆಸರು ಹೋಗಿ 'ನಸ್ರಾಣಿ' ಎಂಬ

ಹೆಸರು ಕಾಯಮ್ ಆಯಿತು.

ಇತ್ತ ಸುಬ್ರಾಯ ಭಟ್ಟನಿಗೆ ಜಿದ್ದು ಉಂಟಾಗಿ ತಹಸಿಲ್ದಾರ ದೊರೆಗಳವರ ಭೇಟಿಯಾದ. ಗಾಣಿಗ ಸಂಕಪ್ಪನನ್ನು ಹಿಡಿದು ಒಳ್ಳೆಯ ಮೂರು ಹುಂಜಗಳನ್ನು ಅವರ ಮನೆಗೆ ಸಾಗಿಸಲಾಯಿತು. ಸರಿ, ಶ್ಯಾನುಭಾಗರಿಗೆ "ಸದರಿ ಮತ್ತಿ ಮರಗಳನ್ನು, ಈ ಅರ್ಜಿದಾರನ ಮನೆ ಸುಟ್ಟುಹೋದುದು ನಿಜವಾದಲ್ಲಿ ಕೊಡಿಸಬಹುದು" ಎಂದು ಹುಕುಮೂ ಬಂದಿತು. ಇದರಿಂದ ಸುಬ್ರಾಯ ಭಟ್ಟನಿಗೆ ಕೋಡು ಬಂದಿತು.

ಒಂದು ದಿವಸ ಅರ್ಜಿಯನ್ನು ತೆಗೆದುಕೊಂಡು ಶ್ಯಾನುಭಾಗರು ಸ್ಥಳ ತನಿಖೆಗೆ ಬಂದರು. ಮನೆ ಸುಟ್ಟ ವಿಚಾರದಲ್ಲಿ ತನಿಖೆಯಾಯಿತು. ಆ ಮೇಲೆ "ಯಾವ ಮರವದು, ನೀವು ಅರ್ಜಿಯಲ್ಲಿ ನಮೂದಿಸಿದ್ದು?" ಎಂದು ಅವನನ್ನು ಕರೆದುಕೊಂಡು ಸ್ಥಳಕ್ಕೂ ಹೋದರು. ಗ್ರಾಮದ ಗುಡ್ಡವನ್ನು ಇಬ್ಬರೂ ಸೇರಿದರು. ನಾಗಯ್ಯ ಸೆಟ್ಟರ ಸವಾರಿಯೂ ಅಲ್ಲಿಗೆ ಬಂದಿತ್ತು. ಸುಬ್ರಾಯ ಭಟ್ಟ ದಿಗ್ವಿಜಯಕ್ಕೆ ಹೊರಟವರ ರೀತಿಯಲ್ಲಿ ಬಂದಿದ್ದ. ಬೆನ್ನಿಗೇ ಸಂಕಪ್ಪ ಮೇನಿಯನಿದ್ದ. ಆದರೆ ಅಲ್ಲಿ ಹೋಗಿ ನೋಡುವಾಗ, ಇವರು ನಮೂದಿಸಿದ ಸದರಿ ಮತ್ತಿಮರಗಳೆರಡನ್ನೂ ಯಾರೋ ಕಡಿದು ಸಾಗಿಸಿಯಾಗಿತ್ತು.

"ಏ ದೇವರೆ! ಈ ಮರಗಳನ್ನು ಕದ್ದು ಸಾಗಿಸಿದವರು ಯಾರು!" ಎಂದು ಸುಬ್ರಾಯ ದಿಗಿಲುಗೊಳ್ಳುವಂತಾಯಿತು. ಆಗ ಭವಾನಿರಾಯರು ನಗುತ್ತ "ಹೋ..ಅದೋ..ಅದೆಂದು ಮೊದಲೇ ಹೇಳಿದ್ದರೆ, ನಾನೇ ಹೇಳುತ್ತಿದ್ದೆನಲ್ಲ: ಕಳೆದ ತಿಂಗಳಲ್ಲಿ ಮೊಸೆ ಸುಬ್ಬನಿಗೆ ತಹಶಿಲ್ದಾರರೇ ಅದನ್ನು ಕೊಡಿಸಿದ್ದರು" ಎಂದು ರಿಕಾರ್ಡನ್ನು ತೋರಿಸಿದರು. ನಪ್ರಾಣಿ ಸುಬ್ರಾಯ ತಣ್ಣಗಾದ.

ಗ್ರಾಮಕ್ಕೆ ಮರಳಿ ಬಂದು ವಿಚಾರಿಸಿದರೆ, ಅವನು ಅರ್ಜಿ ಮಾಡಿದ ತಿಂಗಳಿನ ಅನಂತರವೇ, ಮೊಸೆ ಸುಬ್ಬನು ಅರ್ಜಿ ಹಾಕಿದುದು. ಮೊಸೆ ಸುಬ್ಬ ತನ್ನ ದನದ ಕೊಟ್ಟಿಗೆ ಸುಟ್ಟು ಹೋಯಿತೆಂದು ಅದನ್ನು ಪಡೆದಿದ್ದ. ಅವನು ಮರವನ್ನು ಸಿಗಿಸಿ, ಹೊಸ ಕೊಟ್ಟಿಗೆಯನ್ನು ಕಟ್ಟಿಯೂ ಆಗಿತ್ತು.

ಭವಾನಿರಾಯರು ಗೆದ್ದವರ ದರ್ಪದಿಂದ "ಈ ನಪ್ರಾಣಿ ನನಗೆ ಬುದ್ಧಿ ಹೇಳುತ್ತಾನೇನು!" ಎಂದು ಕುಂದಾಪುರವನ್ನು ಸೇರಿದರು. ಮಳೆಗಾಲವೆಲ್ಲ ಸುಬ್ರಾಯಭಟ್ಟ ಮನೆಯಿಲ್ಲದೆ ಸೋರುವ ಜೋಪಡಿಯಲ್ಲಿ ದಿನ ಕಳೆಯುವಂತಾಯಿತು. ಹೆಚ್ಚಿನ ಪಿಕಲಾಟಕ್ಕೆ ಅವನಲ್ಲಿ ಕಾಸಿಲ್ಲ. ಆದರೆ ಶ್ಯಾನುಭಾಗರ

ಕಾಲಿಗೆ ಉರುಳುಹಾಕಿ ಸಿಕ್ಕಿಸದೆ ಬಿಡಲಾರೆನೆಂದು ಅವನೂ ಪಣತೊಟ್ಟಿದ್ದಾನೆ.

"ಈ ಶ್ಯಾನುಭೋಗರು ಸರಕಾರಿ ಕಾಡಿನಿಂದ ಇಂಥಿಂಥ ಮರಗಳನ್ನು ಕದ್ದು ಕುಂದಾಪುರಕ್ಕೆ ಸಾಗಿಸಿದ್ದಾರೆ........

"ಈ ದರ್ಕಾಸ್ತಿನಲ್ಲಿ ಇವರು ಗ್ರಾಮಸ್ಥರ ವಿಚಾರಣೆ ಮಾಡಿದ್ದೂ ಸುಳ್ಳು, ಕೇಳಿದ್ದೂ ಸುಳ್ಳು" ಹೀಗೆ ಒಂದರ ಮೇಲೊಂದು ಅರ್ಜಿಗಳನ್ನು ಹೊಸೆಯುತ್ತ ಹೋದ. ಅಲ್ಲದೆ ಅವನು ಸಲಿಸಿದ ಕೋಳಿಗಳ ಪ್ರಭಾವದಿಂದ, ತಹಶಿಲ್ದಾರರಿಗೆ ಭವಾನಿರಾಯರ ಮೇಲೆ ಮನಸ್ಸು ಮುನಿಯಿತು. ತತ್ಕಾಲಕ್ಕೆ ಅವರು ತಹಶಿಲ್ದಾರರಾಗಿರುವಾಗ ಯಾವುದೂ ಬೇಡವೆಂದು ಭವಾನಿರಾಯರು "ನನಗೆ ಮೈ ಚೆನ್ನಾಗಿಲ್ಲ" ಎಂದು, ಆರು ತಿಂಗಳ ರಜೆಯ ಮೇಲೆ ಕುಳಿತುಕೊಂಡರು. ನಾಳೆ ಸ್ಟೀಮರಿನಲ್ಲಿ ಹೊರಟು ಮುಂಬಯಿಗೆ ಹೋಗಿ, ಒಂದು ಸರ್ಕೀಟು ಮುಗಿಸಿಬರುತ್ತಾರೆಂಬ ಸುದ್ದಿಯಿದೆ.



# ೧೨. ಕೂಸ ಮುಡೂರ

ಮುಡೂರ ಹೆಸರಿಗೆ ಬಂದುದು ಈ ವರ್ಷ; ಅದೂ ಮೊನ್ನೆ ಮೊನ್ನೆ. ಪ್ರಸಿದ್ಧಿಗೆ ಬಂದುದು ಎಂದರೆ, ತಾನೇ ಬಂದುದಲ್ಲ-ಉಳಿದವರು ಅವನನ್ನು ಹೆಸರಿಗೆ ತರಿಸಿದ್ದು. ಅವನ ಹೆಸರೇನೋ ನಮ್ಮ ಊರವರ ಮಟ್ಟಿಗೆ ಚೆನ್ನಾಗಿ ತಿಳಿದಿದೆ. ಬಾಳೆಹೊನ್ನೂರಿನ ಕಾಫಿ ತೋಟಗಳ ಮೇಸ್ತ್ರಿಗಳೂ ಅವನನ್ನು ಬಲ್ಲರು. ಮಳೆಗಾಲದ ನಟ್ಟಿ ಮುಗಿದರೆ, ಮುಡೂರನ ಮುಂದಿನ ಮೊಕ್ಕಾಂ ಬಾಳೆಹೊನ್ನೂರು. ಬಿಡಾರ ಸಮೇತವಾಗಿ ಅಲ್ಲಿಗೆ ಹೋದನೆಂದರೆ ಕೊಯ್ಲಿನ ಸಮಯವೇ ಊರಿಗೆ ಬರುತ್ತಾನೆ. ಅಲ್ಲಿಂದ ತಿರುಗಿ ಆಗುಂಬೆ ಘಟ್ಟ ಇಳಿಯುತ್ತಾನೆ. "ಕಾಫಿ ಸೀಜನ್" ಮುಗಿಯಿಸಿ ಊರಿಗೆ ಮರಳಿ ಬಂದರೆ, ತಿರುಗಿ ಹೋಗುವುದು ಮಳೆಗಾಲಕ್ಕೇ. ಈ ಸರ್ಕೀಟು ಬೇಸರ ಬಂದು, ತನ್ನ ನೆಂಟರನ್ನೋ ಮಕ್ಕಳನ್ನೋ ಮಾತ್ರ ತೋಟದ ಸೇರೆಗಾರರ ವಶ ಒಪ್ಪಿಸಿ, ಅವನು ಊರಲ್ಲಿ ಕುಳಿತಿರಬಾರದು ಎಂಬುದೂ ಇಲ್ಲ. ಅವನ ಮರ್ಜಿಗೆ ಕಂಡ ಹಾಗೆ.

ಮುಡೂರ ಮುದುಕ; ಪ್ರಾಯ ಅರುವತ್ತು ಹೇಗೂ ಮೀರಬಹುದು. ಅವನ ಕರಿಮೋರೆಯ ಮೇಲೆ ಜೋತಾಡುವ ಬಿಳಿ ಗೊಂಚಲು ಮೀಸೆ 'ತಾನು ಇಲ್ಲಿ ಇದ್ದೇನೆ' ಎಂದು ಸಾರಿ ಹೇಳುವುದನ್ನು ಕಂಡರೆ, ಆತಗೆ ವರ್ಷ ಎಪ್ಪತ್ತು ಆದೀತು ಎನ್ನಬಹುದು. ಆದರೂ ಕರಿ ಮರದ ಸೋಟೆಯ ಹಾಗೆ ಇದ್ದಾನೆ ಆತ. ಬೆಳಿಗ್ಗೆ ಊರನ್ನು ಬಿಟ್ಟು ಹೊರಟ ಎಂದರೆ, ಸಂಜೆ ಹೊತ್ತು ಮುಳುಗುವ ಹೊತ್ತಿಗೆ ಹೇಗೂ ಸೋಮೇಶ್ವರ. ಸೀದಾ ರಸ್ತೆಯನ್ನು ಹಿಡಿದು ನಡೆಯುವುದೇ ಅವನಿಗೆ ಗೊತ್ತಿಲ್ಲ. "ಸರಕಾರಿ ಹೆದ್ದಾರಿಯ ಧೂಳು ಮೆಟ್ಟಿದರೆ ಕಣ್ಣಿಗೆ ಯಾಕೆ ಆದೀತು?" ಎಂಬ ವೈದ್ಯಶಾಸ್ತ್ರ ಬೇರೆ ತಿಳಿದಿದೆ. ಹೀಗೆಂದು ವಡ್ಡರ್ಸೆ, ಸಾಯ್ಬರ ಕಟ್ಟೆ, ಹಿಲಿಯಾಣ-ಹಾಗೆ. ಹೀಗೆ ಎಂದು ನಾಲ್ವತ್ತು ಗುಡ್ಡಗಳ ಮುಳ್ಳುಮೆಟ್ಟಿ, ಅರವತ್ತು ಬೈಲುಗಳ ಕೆಸರು ತುಳಿದರೆ, ಅವನ ಕಣ್ಣಿಗೆ ತಂಪಾಗುತ್ತದೆ. "ಒಳ ದಾರಿಯಷ್ಟು ಸಮೀಪ ಈ ರಸ್ತೆಯಲ್ಲ" ಎಂಬ ಅವನ ತೀರ್ಮಾನವನ್ನು ಬದಲಿಸಲು, ಬ್ರಹ್ಮನಲ್ಲ ಅವನ ಅಪ್ಪ ಬಂದರೂ ಸಾಧ್ಯವಿಲ್ಲ.

ಮುಡೂರನ ಹತ್ತಿರ, 'ದೂರ ಎಷ್ಟು?' ಎಂದು ಕೇಳುವುದೂ ಅವನ

ಪ್ರಾಯವೆಷ್ಟು ಎಂದು ಕೇಳುವುದೂ ಒಂದೇ. ಒಮ್ಮೆ ನೆನಪಿದೆ–ಖಾನೇಶು ಮಾರಿ ಸಮಯವದು, ತನಿಖೆಯವರು ಮುಡೂರನ ಹತ್ತಿರ "ಮುಡೂರ, ನಿನಗೆ ಪಿರಾಯ ಎಷ್ಟಾದೀತು?" ಎಂದು ಕೇಳಿದರು. "ಒಂದು ಐವತ್ತು ಬರೆಸಿ; ನಿಮಗೆ ಗೊತ್ತಿಲ್ಲವ್ದು ನಂಗಾ?" ಎಂಬ ಉತ್ತರ ಬಂತು. "ನಿನ್ನ ಕೂಸಿಗೆ?" ಕೂಸು ಎಂದರೆ ಮಗುವಲ್ಲ, ಮುಡೂರನ ಹೆಂಡತಿ. ಆ ಪ್ರಶ್ನೆಗೆ ಉತ್ತರವಾಗಿ ಮುಡೂರ, ಹೆಂಡತಿಯನ್ನು ಕರೆದು ಕೇಳಿದ:"ಚಿಕ್ಕು, ಇಲ್ಲಿ ಬಾ, ರಾಯರು ನಿಂಗೆ ವರ್ಸೊ ಏಸಾಯಿತು ಎಂದು ಕೇಂತ್ರು"? ಅವಳಿಂದ ಉತ್ತರ ಬಾರದು ದನ್ನು ಕಂಡು ಹೂಂ ಒಂದು ಅರುವತ್ತು ಬರಿನಿ. ಅದ್ರೊಳಗೆ ತಲೆ ಹೋಪ್ಪ ದೇನು!" ಎಂದ. ಖಾನೇಶುಮಾರಿಯವರಿಗೆ ಗೊಳ್ಳೆಂದು ನಗು ಬಂದಿತು. ಮುಡೂರನಿಗೆ ಅವರು ಹಾಸ್ಯಮಾಡುತ್ತಿದ್ದಾರೆಂದು ತೋರಿ "ನಗೋದು ಯಾಕೆ ಒಡೆಯಾ! ಬಡವರ ಮಕ್ಕಳನ್ನು ಕಂಡು ತಾರೀಪು ಮಾಡ್ತ್ರಿಯಾ?" ಎಂದು ಕೇಳಿದ.

ಅವರು ಸಂಗತಿಯನ್ನು ವಿವರಿಸಿ–"ನಿನಗೆ ಐವತ್ತು ಅನ್ನುತ್ತೀ; ಅವಳಿಗೆ ಅರವತ್ತೇ!" ಎಂದು ಹೇಳಿ, ತಿರುಗಿ ನಕ್ಕರು.

ಮುಡೂರನ ಅಸಾಮಾಧಾನ ಹೆಚ್ಚಿತು: "ನೀವೇನು ನಗೂದು? ಅವ ಳಿಗೆ ಐವತ್ತು ಹಾಕಿನಿ, ನನಗೆ ಅರವತ್ತು ಬರಿನಿ. ಆಯ್ತಲ್ಲ. ಅಷ್ಟುತಬ್ದಿಲ್ ಮಾಡಿ ಬರಿಲಿಕ್ಕೆ ಕಷ್ಟವೇ? ಅದಕ್ಕೆಲ್ಲ ಕುಸಾಲೇ!" ಎಂದ.

ಖಾನೇಶುಮಾರಿ ಶ್ಯಾನುಭಾಗರು ಬಲು ಕಷ್ಟದಿಂದ ಮುಡೂರನಿಗೆ ಸಂಗತಿ ವಿವರಿಸಿ, ಸರಕಾರಿ ಹುಕುಂ ಪ್ರಕಾರ ತಾನು ಸಂಗತಿ ವಿಚಾರಿಸಿದೆ— ಎಂದು ಹೇಳಿ, ತೆರಳಬೇಕಾಯಿತು. ಅವರು ಹೊರಟು ಹೋದ ಮೇಲೆ, ಮುಡೂರನಿಗೆ "ವರ್ಷ ತಿಳಿಸಿ ಆಯಿಸ್ಸ ಕಡಿಮೆಯಾಯಿತಲ್ಲ" ಎಂಬ ಚಿಂತೆ ಬಲು ದಿನಗಳ ವರೆಗೆ ಬಾಧಿಸುತ್ತಿತ್ತು.

ಪ್ರಾಯದ ಗಣಿತ ಹೀಗಾದರೆ, ದೂರದ ಗಣಿತ ಹೇಳುತ್ತೇನೆ. ಒಮ್ಮೆ ಮೂಡರನೊಡನೆ "ಸೋಮೇಶ್ವರಕ್ಕೆ ನನ್ನ ಊರಿನಿಂದ ಎಷ್ಟು ದೂರವಾಗ ಬಹುದು" ಎಂದು ಕೇಳುವ ಪ್ರಸಂಗ ಬಂದಿತ್ತು. "ಏನು...ಎರಡು ಹರದಾರಿ ಆದೀತು" ಎಂದು ಮುಡೂರನ ಉತ್ತರ. ಸಾಧಾರಣ ಹತ್ತು ಹರದಾರಿಯ ಸರಕಾರಿ ರಸ್ತೆ, ಅವನ ಅಳತೆಯಲ್ಲಿ ಎರಡು ಹರದಾರಿಯಷ್ಟಕ್ಕೆ ಕುಗ್ಗಿತ್ತು.

ಮುಡೂರನ ಕುಟುಂಬ ಹಿರಿಯದು. ಚಿಳ್ಳೆಪಿಳ್ಳೆಗಳೆಂದು ಸುಮಾರು

ಹಿಶ್ತಿಪ್ಪತ್ತು ತಲೆಗಳು ತುಂಬಿರುವ ಗುಡಿಸಲು ಅವನದು. ಅಕ್ಕನ ಮಕ್ಕಳು, ತಂಗಿಯ ಮಕ್ಕಳು, ಮಕ್ಕಳ ಮೊಮ್ಮಕ್ಕಳು ಮತ್ತು ಮರಿಮಕ್ಕಳು ಎಂದು-ಗೂಡಲ್ಲಿ ಕೋಳಿಮರಿಗಳು ತುಂಬಿದಂತೆ ಮನೆಯಲ್ಲಿ ಮಕ್ಕಳು ತುಂಬಿದ್ದಾರೆ, ನಮ್ಮೂರ ಬೈಲಿನ ಅಗಲವಾದ ಒಂದು ಕಟ್ಟಿನ ಮೇಲೆ ಅವನ ಬಂಗ್ಲೆ. ಹಗಲು ರಾತ್ರೆಗಳಲ್ಲಿ ಕಡಲಿನ ಗಾಳಿ 'ರುಮುರುಮು' ಬೀಸುವ ತಾವು. ಮಳೆಗಾಲದ ಗಾಳಿಯ ಅಬ್ಬರಕ್ಕೆ ಮುಡೂರನ ಮೀಸೆ ಕಳಚಿ ಉದುರದುದ ಆಶ್ಚರ್ಯ. ಆದರೂ ಮುಡೂರನ ಬಿಡಾರ ಅಲ್ಲಿಂದ ಕದಲುವುದಿಲ್ಲ. ಎರಡು ಮೂರು ಅಂಕಣ ವಿಶಾಲವಾದ ಗುಡಿಸಲು. ಮಗ್ಗುಲಲ್ಲಿ ತಿರುಗಿ ಅಷ್ಟೇ ದೊಡ್ಡ ಇನ್ನೊಂದು ಕೊಗಳು. ಮುಖ್ಯ ಗುಡಿಸಲಿಗೆ ಅರ್ಧ ಗೋಡೆ. ಮೇಲೆ ಮಡಲಿನ ತಟ್ಟಿ. ಕಿಟಿಕಿಗಳ ಬಗ್ಗೆ ನಾಲ್ಕು ಗಡಿಗೆಗಳ ಕತ್ತುಗಳಿವೆ. ಅದರ ಮೇಲೆ ಅಂಕುಡೊಂಕು, ಏರುತಗ್ಗುಗಳಿಂದ ಪೂರ್ಣವಾದ ಒಂದು ಮಾಡಿದೆ. ಒಳಿಯ ಕೊಟ್ಟಿಗೆಗೆ ಅಷ್ಟೊಂದು ವೈಭವವಿಲ್ಲ. ಸುತ್ತಲೂ ಒಂದಡಿ ಎತ್ತರದ ಮಣ್ಣಿನ ದಂಡೆಯಲ್ಲದೆ ಬೇರೆ ಮರೆಯಿಲ್ಲ. ಮನೆಯ ಬಾಗಿಲಿಗೆ, ಒಂದು ತೂಗಾಡುವ 'ಹನೆಹೆಡೆ.' ಮಳೆಗಾಲ ಬಂದರೆ-ಯಾರನ್ನಾದರೂ ಬೇಡಿ, ಕಾಡಿ, ಇನ್ನೊಂದು ಹತ್ತು ಹನೆಮರದ ಗರಿಗಳನ್ನು ತಂದು, ನಾಲ್ಕು ಸುತ್ತಲೂ ತೂಗಿಸುತ್ತಾನೆ. ಕಡಲಿನ ಘರ್ಜನೆಗೆ ಎದುರಾಗಿ, ಇವುಗಳ ಪ್ರತಿಘರ್ಜನೆ 'ದರದರ ಬರಬರ' ಹಗಲು ರಾತ್ರಿ ಒಂದೇ ಸವನೆ ಕೇಳಿಸುತ್ತಿರುತ್ತದೆ.

ಅವನಿಗಿರುವ ಈ ಸಂಸಾರ ಸಾಲದೆಂದು, ಮನೆಯ ಒಳಗೆ, ಹೊರಗೆ ಸೊಂಪಾಗಿ ಅಂಡಲೆಯುವ ನಾಲ್ಕಾರು ಕಾಟು ಮೋಟು ನಾಯಿಗಳೂ ಸಹ ಇವೆ. ಇವನ ಸಂಸಾರದ ಹೊಟ್ಟೆಗೆ ಏನು ಬೀಳುತ್ತದೋ, ಇವನ ಶ್ವಾನ ಸಂಸಾರಕ್ಕೆ ಏನು ದೊರೆಯುತ್ತದೋ ಬುದ್ಧಿಗೆ ನಿಲುಕದ ವಿಷಯ.

ಮನೆಯವರಲ್ಲಿ ಯಾರೊಬ್ಬರಿಗೂ ಮೈತುಂಬ ಹೊದಿಕೆ ಇಲ್ಲ; ಹೊಟ್ಟೆ ತುಂಬ ಕೂಳು ಏನೆಂದೂ ತಿಳಿದಿಲ್ಲ. ಮನೆಯ ಹೆಂಗಸರು-ಅಲ್ಲಿ ಇಲ್ಲಿ ಗದ್ದೆ ಅಂಚಿನಲ್ಲಿ ಬೆಳೆದ ಹುಲ್ಲನ್ನು ಕದ್ದು, ಕೊಯ್ದು, ಪೇಟೆಗೆ ಒಯ್ದು ಹೊರೆಗೆ ಒಂದಾಣೆಯಂತೆ ಮಾರಿ ಸಿಕ್ಕಿದ್ದಕ್ಕೆ, ಬತ್ತ ಕೊಂಡುಕೊಂಡು ಬರುತ್ತಾರೆ. ಈ ರೀತಿ ದುಡಿಯುವ ಆರು ಹೆಣ್ಮಕ್ಕಳು ಮನೆಯಲ್ಲಿದ್ದಾರೆ. ಮತ್ತೇನಾದರೂ ಊರಿನ ಚಿಲ್ಲರೆ ಕೆಲಸಗಳೂ ಇಲ್ಲ. 'ಮುಟ್ಟಾಳು' ಅಲ್ಲವಾದುದರಿಂದ ಹೆಚ್ಚಿನ ಕೂಲಿಗೆ ಅವಕಾಶವಿಲ್ಲ. ಅವನ ಒಂದೆರಡು ಹುಡುಗರು, ಆಳಿಯಂದಿರು,

ಘಟ್ಟಕ್ಕೆ ದುಡಿಯಲು ಹೋದರೆ, ಬರುವಾಗ ಎಂಟಾಣೆ ನಗದು ತಂದರೆ, ಜತೆಗೆ ರೂಪಾಯಿ ಗಾತ್ರದ ಚಳಿ ಜ್ವರವನ್ನೂ ತರುತ್ತಾರೆ.

ಮುಡೂರನ ಆರ್ಥಿಕ ಸಂಪತ್ತಾಗಲಿ, ಅವನು ಹೆಸರುವಾಸಿಯಾದ್ದ ವಿಚಾರವಾಗಲೀ ಮುಖ್ಯವಲ್ಲ. ಅವನ ವಿಷಯ ಇಷ್ಟೇ ಎಂದು ಹೇಳುತ್ತೇನೆ. ಒಂದು ದಿವಸ ಉಡುಪಿಯಿಂದ ಒಬ್ಬ ಕಾಂಗ್ರೆಸು ದೇಶ ಭಕ್ತರು ಬಂದು, ಜನ ಪೈಗಳ ಅಂಗಡಿಯಲ್ಲಿ ಬಿಡಾರ ಹೂಡಿದರು. ಆ ರಾತ್ರಿ ಪೈಗಳ ಅಂಗಳದಲ್ಲಿ ತಾಳಮದ್ದಲೆ ಇದೆಯೆಂಬ ಸುದ್ದಿಯಾಯಿತು. ತಾಳಮದ್ದಲೆ ಎಂದ ಮೇಲೆ-ತಿಮ್ಮಪ್ಪ ಅಕ್ಕಸಾಲಿ, ಅಣ್ಣು, ನಾಗಯ್ಯ ಸೆಟ್ಟರು, ಸೀತೈತಾಳರು, ಚನ್ನಪ್ಪ ಮಯ್ಯರು, ಅವರು, ಇವರು ಎಂದು 'ಆಪಾಟಿ' ಜನ ಜಮಾಯಿಸಿತು. ರಾತ್ರಿ ಗದ್ದಲವೇ ಗದ್ದಲ! ತಾಳಮದ್ದಲೆ ಬಲು ಆರ್ಭಟೆಯಿಂದ ಶುರುವಾಯಿತು. ಆದರೆ ಒಮ್ಮೆಗೇ ನಡುರಾತ್ರಿಗೆ ಅದನ್ನು ನಿಲ್ಲಿಸಿ, ಉಡುಪಿಯಿಂದ ಬಂದಿದ್ದ, ಗಾಂಧಿ ಪಾರ್ಟಿಯವರು ಲೆಕ್ಚರು ತೊಡಗಿದರು. "ನಮ್ಮ ಊರಲ್ಲೆಲ್ಲ ಕಾಂಗ್ರೆಸಿನ ಪ್ರಾಬಲ್ಯ ಬಂದಿದೆ. ಹೀಗಿರುತ್ತ ನಿಮ್ಮ ಊರಿಗೆ ಒಂದು ಕಾಂಗ್ರೆಸು ಕಮಿಟಿ ಇಲ್ಲವಾದರೆ ಭೂಷಣವಿಲ್ಲ" ಎಂದು ಜನ್ನ ಪೈ ಮೊದಲಾದವರನ್ನು ಹುರಿದುಂಬಿಸಿದರು. ಜನ್ನ ಪೈಗಳೂ ಆ ಲೆಕ್ಚರನ್ನು ಕೇಳಿ ಉಬ್ಬಿದರು. ಉಡುಪಿಯವರ ಲೆಕ್ಚರಿನ ಬಳಿಕ ಜನ್ನ ಪೈಗಳು ಸ್ವತಃ ಎದ್ದು ನಿಂತು, "ಹೌದಯ್ಯ, ನಮ್ಮ ವೈಕುಂಠ ಕಮ್ತಿಯವರು ಹೇಳಿದ್ದು ಸಮ. ಅಲ್ಲೆಲ್ಲ ಭಾರೀ ಕಮಿಟಿ ಗಿಮಿಟಿಯಾಗಿ ಡಿಸ್ಟ್ರಿಕ್ಟ ಬೋರ್ಡು, ಕೌನ್ಸಿಲುಗಳಿಗೆ ಕಾಂಗ್ರೆಸು ಮೆಂಬರರು ಹೋಗುತ್ತಿದ್ದಾರೆ. ಹೀಗಿದ್ದು ನಮ್ಮ ಊರಿನಲ್ಲಿ ಇಷ್ಟೆಲ್ಲ ಅತಿರಥರು, ಮಹರಥರುಗಳು ಇರುತ್ತ, ನಾವು ಪಡಪೋಶಿ ಎನಿಸುವುದೇ? ನಮಗೂ ಒಂದು ಕಾಂಗ್ರೆಸು ಇರಬಾರದೇಕೆ?" ಎಂದರು.

ಸರಿ, ಸೇರಿದ್ದ ಮಹಾನುಭಾವರೆಲ್ಲರಿಗೂ ಬಹಳ ಉಮೇದು ಉಂಟಾಯಿತು. ಆಗ ನಾಗಯ್ಯ ಸೆಟ್ಟರು "ಹಿಂದುಮುಂದು ನೋಡುವುದೇನು? ಒಂದು ಕಮಿಟಿ ಹುಡಿ ಹಾರಿಸುವ" ಎಂದರು. ಹೆಚ್ಚು ಹೊತ್ತಿಲ್ಲ_ಸರಸರ ನೂರು ಹೆಸರುಗಳನ್ನು ಕಾಂಗ್ರೆಸು ಮೆಂಬರಿಕೆಗೆ ಬಠಾಯಿಸಿದರು. ಜನ್ನ ಪೈಗಳು ಹಿಗ್ಗಿನಿಂದ ವೈಕುಂಠ ಕಮ್ತಿಯವರನ್ನು ಕರೆದು, "ಇನ್ನು ಬೇಕೇನು ಹೇಳಿ ನಿಮಗೆ?" ಎಂದರು. "ಎಲ್ಲರೂ. ಅಂದರೆ ಆ ಹೆಸರು ಕೊಟ್ಟವರು ವರ್ಷಕ್ಕೆ ನಾಲ್ಕಾಣೆ ಯಂತೆ ವಂತಿಗೆ ಕೊಟ್ಟರೆ ಸರಿ" ಎಂಬ ಉತ್ತರ ಬಂದಿತು. "ಒಂದಾಣೆ ನಿಮ್ಮ

ಊರಲ್ಲಿ ಉಳಿಯುತ್ತದೆ. ಉಳಿದುದು ಮೇಲೆ ಜಿಲ್ಲಾ ಕಮಿಟಿ, ಕೆ. ಪಿ. ಸಿ. ಸಿ. ಎ.ಐ.ಸಿ.ಸಿ. ಹೀಗೆಲ್ಲಾ ಹೋಗುತ್ತದೆ" ಎಂದು ಹಣದ ಲೆಕ್ಕ ವಿವರಿಸಿದರು.

ಸೀತ್ರೈತಾಳರಂಥವರಿಗೆ 'ನಾಲ್ಕಾಣೆ' ಎಂದುದನ್ನು ಕೇಳಿ ಮುಕ್ಕಾಲು ಪಾಲು ದಮ್ಮು ಇಳಿಯಿತು. ಕೆಲವರು "ನಾಲ್ಕಾಣೆಗೀಲ್ಕಾಣೆ ಪಂಚಾತಿಕೆಯಾದರೆ ನಮ್ಮ ಹೆಸರನ್ನು ಹೊಡೆಯಿರಿ" ಎಂದರು. ಒಬ್ಬರು "ನಾಲ್ಕಾಣೆಗೆ ಅರ್ಧ ಬೇಳೆಯಷ್ಟು ಎಣ್ಣೆ ಬರುತ್ತದೆ" ಎಂದರು. ಸೀತ್ರೈತಾಳರು "ಅಷ್ಟೆಲ್ಲ ಬೇಡ, ಕೊಡುವಾಗಲಲ್ಲವೋ" ಎಂದು ಗುರುಗುರಿಸಿ ಸುಮ್ಮನಾದರು. ಆ ದಿನದ ಸಭೆಗೆ ನಮ್ಮ ರೂರಲ್ ಆಸ್ಪತ್ರೆ ರಾಮರಾಯರು ತೀರ ಉಮೇದಿನಿಂದ ಬಂದಿದ್ದರು. ರಾಮರಾಯರ ಹುಟ್ಟೂರು ನಮ್ಮದಲ್ಲ. ತೆಂಕಣದ ಎರ್ಮಾಳವೋ ಕಾಪೋ, ಸುರತ್ಕಲ್ಲೋ. ಅವರಿಗೆ ಕಾಂಗ್ರೆಸ್ ಸರಕಾರ ಬರುವ ವಿಚಾರದಲ್ಲಿ ಬಹಳ ಉತ್ಸಾಹ. ನಮ್ಮ ಊರಿಗೆ 'ಇಂಗ್ಲಿಷ್ ಡೈಲಿ' ಮೊದಲಿಗೆ ತರಿಸಿದವರೇ ಅವರು. ಒಟ್ಟಿಗೆ ನಮ್ಮಲ್ಲಿ 'ಟಸ್‌ಪುಸ್' ಮಾಡಬಲ್ಲವರು ನಾಲ್ಕಾರು ಮಂದಿ. ಪೇಪರು ಓದುವವರೆಂದರೆ ರಾಮರಾಯರು. ಆದರೂ ಊರವರಿಗೆ ಗಾಳಿಯನ್ನು ಹಾಕಿ, ಒಂದು ಕ್ಲಬ್ಬನ್ನು ತೆರೆದರು. ಕ್ಲಬ್ಬಿನಲ್ಲೇ ಕಾಂಗ್ರೆಸು ಕಚೇರಿಯಾಗುವುದರಲ್ಲಿ ರಾಮರಾಯರಿಗೆ ತುಂಬ ಸಂತೋಷ, ಹಾಗಾಗಿ ರಾಮರಾಯರೇ ಮುಂದಕ್ಕೆ ಬಂದು "ಇಷ್ಟು ಮೆಂಬರರು ಇಲ್ಲಿ ಜಮೆಯಾದ ಮೇಲೆ, ಅಧ್ಯಕ್ಷರು ಉಪಾಧ್ಯಕ್ಷರನ್ನೂ ಆರಿಸಿಬಿಡುವ" ಎಂದು ಸೂಚಿಸಿದರು! ಅದು ವೈಕುಂಠ ಕಮ್ತಿಯವರಿಗೂ ಇಷ್ಟವಿತ್ತು. ಹಾಗಾಗಿ ಮುಂದಿನ ಕಾರ್ಯಕ್ರಮಕ್ಕೆ ಕೈಹಾಕಲಾಯಿತು!

"ಈಗಲೇ ಒಬ್ಬ ಅಧ್ಯಕ್ಷರು; ಇನ್ನೊಬ್ಬ ಉಪಾಧ್ಯಕ್ಷರು ಮತ್ತು ಖಜಾನ್ಚಿ, ಕಾರ್ಯದರ್ಶಿಯವರು ಇವರನ್ನು ಆರಿಸಿಬಿಟ್ಟರೆ, ಕಮಿಟಿಯ ಫೌಂಡೇಶನ್ ಬಲವಾಯಿತಲ್ಲ" ಎಂದು ಸೂಚಿಸಿದರು. ರಾಮರಾಯರ ಮನಸ್ಸಿನಲ್ಲಿ ಚನ್ನಮಯ್ಯರನ್ನು ಅಧ್ಯಕ್ಷರಾಗಿ ಮಾಡಬೇಕೆಂಬ ಆಸೆಯಿತ್ತು. ಆ ದಿನದ ನವಾಬರೆಂದರೆ ಮಯ್ಯರು; ಅವರಿಂದ ನಾಲ್ಕು ಕಾಸು ಖರ್ಚು ಮಾಡಿಸಬಹುದು. ಹೀಗೆಂದು ಊಹಿಸಿ "ನಾನು ಚನ್ನಮಯ್ಯರನ್ನು ಅಧ್ಯಕ್ಷಸ್ಥಾನಕ್ಕೆ ಸೂಚಿಸುತ್ತೇನೆ" ಎಂದು, ಜನ್ನ ಪೈಗಳ ಹಿಂಗಡೆ ನಿಂತು, ಅವರ ಬಾಯಿಂದ ಅಷ್ಟು ಮಾತನ್ನು ಹೇಳಿಸಿದರು. ಸುತ್ತು ನೆರೆದವರು ಮುಖಮುಖ ನೋಡತೊಡಗಿದರು. ಆಗ ನಾಗಯ್ಯ ಸೆಟ್ಟರಿಗೆ ಸತ್ತಹಾಗಾಯಿತು. ಅಲ್ಲಿ ನರಸ

ಉಪಾಧ್ಯಾಯರೂ ಇದ್ದರು. ಸೀತೈತಾಳರಿಗೂ ಚನ್ನಮಯ್ಯರ ಮೇಲಿನ ಹಳೇ ಬಾಕಿ ಮತ್ಸರವಿದ್ದಿತ್ತು. ಇತ್ತ ಕೆರೆಕಟ್ಟೆ ನರಸಿಂಹಯ್ಯನೂ ನಿಂತಿದ್ದ. ಅವರೊಳಗೆ ಗುಜುಗುಜು ಮಾತಾಗಿ 'ನಾನು ನಾಗಯ್ಯ ಸೆಟ್ಟರನ್ನು ಸೂಚಿಸುತ್ತೇನೆ' ಎಂದು ನರಸಿಂಹಯ್ಯ ಸೂಚಿಸಿದ. ಅಲ್ಲಿಗೆ ರಣಾಗ್ರಕ್ಕೆ ಪೀಠಿಕೆಯಾಯಿತು. ಡಾಕ್ಟರರು ನಮ್ಮ ಊರಿಗೆ ಬಂದು, ಮೂರು ನಾಲ್ಕು ವರ್ಷಗಳಾಗಬಹುದಾದರೂ ನಮ್ಮಲ್ಲಿನ ನೀರಿನ ಗುಣ ಎಂಥದೆಂದು ತಿಳಿದವರಲ್ಲ. ಈ ಗದ್ದಲವನ್ನು ಕಂಡು ಅಂಜಿ, ಅವರು "ಕವ್ತಿಯವರೇ, ಇಲ್ಲಿಗೇ ಬಿಟ್ಟುಬಿಡಿ. ಇವತ್ತು ಯಾವುದೂ ಬೇಡ. ಇನ್ನೂ ನೂರಿನ್ನೂರು ಮೆಂಬರರು ಸೇರಿಯಾರು. ಎಲ್ಲರನ್ನು ಸೇರಿಸಿದ ಮೇಲೆಯೇ ಅಧ್ಯಕ್ಷರನ್ನು ಆರಿಸುವ. ಸುಮ್ಮನೆ ನಮ್ಮನ್ನು ಕರೆಯಲಿಲ್ಲ, ನಮಗೆ ತಿಳಿದಿಲ್ಲ-ಎಂದು ಊರವರ ಫಿರ್ಯಾದು ಕೇಳುವ ರಗಳೆ ಬೇಡ" ಎಂದರು. ಜನ್ನ ಪೈಗಳಿಗೂ 'ಹವೆ ಕೆಟ್ಟಿತು' ಎಂಬುದು ತಿಳಿದು ಅವರೂ ಸೈಗುಟ್ಟಿದರು. ಚುನಾವಣೆ ಮುಂದುವರಿಯಿತು. ರಾತ್ರಿ ಹಾಗೆಯೇ ಮನೆಗೆ ಜನರನ್ನು ಕಳುಹಿಸುವುದು ಸರಿಯಲ್ಲವೆಂದು, ತಾಳಮದ್ದಲೆಯನ್ನು ಮುಂದುವರಿಸಿದರು.

ಸರಿ, ಮರುದಿನ ಬೆಳಿಗ್ಗೇ ನಾಗಯ್ಯ ಸೆಟ್ಟರು, ಚನ್ನಮಯ್ಯರು, ಕೆರೆಕಟ್ಟೆ ನರಸಿಂಹಯ್ಯನವರ ತಲೆಗಳ ಮೇಲೆ ಒಂದೊಂದು ಗಾಂಧಿಟೋಪಿ ಏರಿತು. ಅವರು ಕಾಂಗ್ರೆಸ್ ಮೆಂಬರರನ್ನು ಸೇರಿಸುತ್ತ ಹೊರಟರು. ಎಂಟು ದಿನಗಳಲ್ಲಿ ೫೦೦ ಮೆಂಬರರು ಆದರು. ಆದರೆ ಯಾರ್‍ಯಾರ ಕಡೆಗೆ ಎಷ್ಟೆಷ್ಟು ಎನ್ನುವ ಹಾಗಿಲ್ಲ. ಅಂತು ಇಲೆಕ್ಷನಿಗಾಗಿ ನಾಗಯ್ಯ, ನರಸಿಂಹಯ್ಯ, ದ್ರೋಣಾಚಾರ್ಯರಂತಹ ಸೀತೈತಾಳರು ಒಂದಾದರು. ಈ ತನಕವೂ ನಾಗಯ್ಯ ಸೆಟ್ಟರಿಗೂ ಡಾಕ್ಟರರಿಗೂ ಇದ್ದ ಸ್ನೇಹ ಸಡಿಲಾಯಿತು. ಇತ್ತ ಡಾಕ್ಟರರಿಗೆ ಚನ್ನಮಯ್ಯರ ಪಂಗಡ ಬಿಡುವ ಇಷ್ಟವಾಗಲಿಲ್ಲ. ಅವರಲ್ಲಿ ಕಾಸಿರುವಷ್ಟರ ತನಕ, ಜನರ ಬೆಂಬಲವೂ ಅವರಿಗೇ ಎಂಬುದು ಡಾಕ್ಟರರ ತಿಳಿವಳಿಕೆ.

ಅಂತು ಕಾಂಗ್ರೆಸ್ ಚುನಾವಣೆಯ ಸಭೆಯನ್ನು ಊರಿನ ಸಂತೆ ದಿವಸ ಕರೆದರು. ಆ ದಿವಸ ತಾಳಮದ್ದಲೆಗೆ ಬಂದುದರ ಇಮ್ಮಡಿ ಜನ ಕಲೆಯಿತು. ಡಾಕ್ಟರರನ್ನು ಸಭೆಗೆ ಅಧ್ಯಕ್ಷರನ್ನಾಗಿ ಮಾಡಿ ಚುನಾವಣೆ ಮುಂದುವರಿಸಲು ನಿರ್ಣಯವಾಯಿತು. ಈ ಸಭೆಯು ಜನ್ನ ಪೈಗಳ ಅಂಗಳದಲ್ಲಿ ನೆರೆಯಿತು. ಆ ದಿನದ ಸಭೆಯಿಂದ ಪೈಗಳ ವ್ಯಾಪಾರಕ್ಕೆ ಬಂದ ತೊಡಕು ಸ್ವಲ್ಪ

ವಲ್ಲ. ಆದರೆ ಪ್ರಥಮ ಬಾರಿ, ವೈಕುಂಠ ಕಮ್ತಿಯವರ ದಾಕ್ಷಿಣ್ಯಕ್ಕೆ ಕಟ್ಟುಬಿದ್ದು ಮಾಡಿದ ಕೆಲಸವನ್ನು ಕೊನೆಗಾಣಿಸದೆ ಮಾರ್ಗವಿದೆಯೇ?

ಸಭೆ ತೊಡಗಿತು. ನಸ್ರಾಣಿ ಸುಬ್ಬಭಟ್ಟ ಎದ್ದು ನಿಂತು "ನಾನು ಚನ್ನ ಮಯ್ಯರನ್ನು ಅಧ್ಯಕ್ಷಸ್ಥಾನಕ್ಕೆ ಸೂಚಿಸುತ್ತೇನೆ" ಎಂದ. ಜನ್ನ ಪೈಗಳು ವ್ಯಾಪಾರದ ಗಡಿಬಿಡಿಯ ನೆಪ ಹೇಳಿ ಸಭೆಯ ಹತ್ತಿರವೇ ಸುಳಿಯಲಿಲ್ಲ. ಈ ಸೂಚನೆಗೆ, ಅಲ್ಲಿಯೇ ಯಾರೋ ದೂರದಿಂದ, "ನಾನು ಅನುಮೋದಿಸು ತ್ತೇನೆ" ಎಂದರು. ಬೇರೆ ಇನ್ನೊಂದು ಹೆಸರು ಅಧ್ಯಕ್ಷ ಪದವಿಗೆ ಮುಂದೆ ಬರಲೇ ಇಲ್ಲ. ಡಾಕ್ಟರರಿಗೆ ಆಶ್ಚರ್ಯವಾಯಿತು. ನಾಗಯ್ಯ ಸೆಟ್ಟರು ಕಾಳಗಕ್ಕೆ ಕಾಲಿರಿಸುವುದಿಲ್ಲ ಎಂಬ ಧೈರ್ಯವಾಯಿತು ಅವರಿಗೆ. ನಸ್ರಾಣಿ ಸುಬ್ಬಭಟ್ಟ ನನ್ನು ಯಾರೋ ಉಪಾಧ್ಯಕ್ಷ ಪದವಿಗೆ ಸೂಚಿಸಿದರು. ಅದೂ ಸ್ವೀಕೃತವಾ ಯಿತು. ಆ ಬಳಿಕ ಕಾರ್ಯದರ್ಶಿ ಯಾರೆಂದು ಯೋಚನೆ ಮಾಡುವಷ್ಟರಲ್ಲಿ,– ಸೆಟ್ಟರು ಎದ್ದು ನಿಂತು "ದೊಡ್ಡಬೈಲು ಮುಡೂರ ಕಾರ್ಯದರ್ಶಿಯಾಗಲಿ" ಎಂದರು. ಸಾಲದುದಕ್ಕೆ "ಮುಡೂರ, ಬಂದಿದ್ದೀಯಲ್ಲ" ಎಂದರು. ಅವರ ಮಾತಿಗೆ ಬೆಂಬಲ ಕೊಡುತ್ತ ನರಸಿಂಹಯ್ಯ "ನಾನು ಅನುಮೋದಿಸುತ್ತೇನೆ" ಎಂದ. ಮುಡೂರ ಸೆಟ್ಟರ ಹೇಳಿಕೆಯಂತೆ ಸಭೆಗೆ ಬಂದಿದ್ದ. 'ಬಂದಿದ್ದೇ ನಲ್ಲ' ಎಂದು ಹೇಳಲು ಎದ್ದು ನಿಂತ. ಆದರೆ ಈ ಗದ್ದಲ ಏನೆಂದು ತಿಳಿಯು ವಷ್ಟು ತಿಳುವಳಿಕೆ ಅವನಿಗೆ ಬರಲಿಲ್ಲ. ಮುಡೂರನ ಹೆಸರನ್ನು ಕೇಳುತ್ತ ಸಭೆ ನಕ್ಕಿತು. ಇನ್ನಾರೋ ಮುಂದೆ ಬಂದು "ಲಕ್ಷ್ಮಣ ಉಪಾಧ್ಯರು ಕಾರ್ಯದರ್ಶಿ ಯಾಗಲಿ" ಎಂದು ಸೂಚಿಸಿದರು. ಅವರ ಹೆಸರು ಹೆಚ್ಚಿನವರಿಗೆ ತಿಳಿಯ ದಾದರೂ, ಈ ತೊಡಕು ತಪ್ಪಲಿ ಎಂದು ಯಾರೋ ಸೂಚನೆ ಮಾಡಿದ್ದರು. ಆದರೆ ಸಭೆಯಲ್ಲಿ ಜೋರು ಗದ್ದಲಕ್ಕೇ ಪ್ರಾರಂಭವಾಯಿತು. ಓಟು ತೆಗೆಯ ಬೇಕಾಯಿತು. ಓಟು ತೆಗೆದಾಗ ಮುಡೂರನಿಗೆ ೮೯ ಓಟು; ಉಪಾಧ್ಯರಿಗೆ ೧೭. ಅಲ್ಲಿಗೆ ಉಳಿದವರು "ನಮಗೀ ತಂಟೆಯೇ ಬೇಡ" ಎಂದು ಸುಮ್ಮನಾದರು.

ಅಂದಿನ ಸಭೆಯ ಕೋಲಾಹಲ ಹೆಚ್ಚಿ, ಕಮಿಟಿ ಮೆಂಬರರ ಆಯ್ಕೆ ನಿಂತಿತು. ಎಲ್ಲರೂ 'ಮುಡೂರನ ಕಾಂಗ್ರೆಸ್' ಎಂದು ನಗುತ್ತ ನಡೆದರು. ಮುಡೂರನಿಗೆ ಒಂದೂ ತಿಳಿಯದು. ನಾಗಯ್ಯ ಸೆಟ್ಟರು 'ಬಾ' ಎಂದಿದ್ದರು. ಅವನ ಮನೆಗೆ ಸ್ಥಳವನ್ನು ಕೊಟ್ಟ ನರಸಿಂಹಯ್ಯ "ನೀನು ಇರಬೇಕು" ಎಂದು ತಿಳಿಸಿದ್ದರು. ಹಾಗೆ ಬಂದು ಕುಳಿತ ತಪ್ಪಿಗೆ ಅವನ ತಲೆಗೆ ಕಾಂಗ್ರೆಸು ಸುತ್ತಿತ್ತು.

ಚನ್ನ ಮಯ್ಯರು ಬಹಿರಂಗವಾಗಿ ರೇಗಿಬಿದ್ದರು. “ಈ ಮುಡೂರನಿಗೆ ಇಷ್ಟು ಕೊಬ್ಬು ಬಂದಿತೇ?” ಎಂದು ಅವರು ಹಾರಾಡಿದರು.

ಆದರೆ ಮುಡೂರನ ಕಾರ್ಯದರ್ಶಿತ್ವಕ್ಕೆ ಒಂದು ವಾರ ಕಾಲವೂ ಬಾಳ್ವೆ ಉಳಿಯಲಿಲ್ಲ.

ಮುಂದಿನ ಸೋಮವಾರ ಊರಿನ ಸಂತೆ ತಿರುಗಿ. ಅದಕ್ಕೆ ಗ್ರಹಚಾರ ವಶದಿಂದ ಒಬ್ಬ ಕಂಬಳಿ ವ್ಯಾಪಾರಿ ಬಂದಿದ್ದ. ಆ ವ್ಯಾಪಾರಿ ಸಂಜೆ ಅಲ್ಲಿಯೇ ಇದ್ದನೆಂದು ಹೇಳುತ್ತಾರೆ. ಅಂತು ಬೆಳಿಗ್ಗೆ ಸಂತೆಯ ಚಾವಡಿಯಲ್ಲಿ ಅವನ ಹೆಣ ಮಲಗಿತ್ತು. ಅವನ ಕಿಸೆಯಲ್ಲಿದ್ದ ಕಾಸು ಬರಿದಾಗಿತ್ತು. ಅವನ ಹತ್ತಿರ ರೂ. ೩೦೦ ನಗದಿಯಿಂದ ಇತ್ತು ಎನ್ನುತ್ತಾರೆ ಕೆಲವರು. ೫೫೦ ೧೧-೫ ಇತ್ತು ಎಂದು ಅವನ ಕರಣೀಕರೆಂಬಷ್ಟು ಖಾತ್ರಿಯಿಂದ ನುಡಿಯುವವರು ಕೆಲವರು. ಅಂತು ಅವನೂ ಇಲ್ಲ; ಅವನಲ್ಲಿ ಇದ್ದಿರಬಹುದಾದ ಹಣವೂ ಇಲ್ಲ. ಮಂಗಳವಾರ ಸಂಜೆ ಸಮಯಕ್ಕೆ ಪಟೇಲರಿಂದ ಸುದ್ದಿಯು ಮುಟ್ಟಿ, ಪೋಲೀಸರು ತನಿಖೆಗೆ ಬಂದರು. ತನಿಖಿ ನಡೆದು, ಹೆಣ ಸಾಗಿಸಲ್ಪಟ್ಟಿತು. ಗುಮಾನಿಯ ಮೇಲೆ ‘ಕಾಂಗ್ರೆಸು ಮುಡೂರ’ನನ್ನು ಹಿಡಿದುಕೊಂಡು ಹೋದರು. ಅವನ ಮನೆಯಲ್ಲಿ ಕಾಸೇನೂ ಸಿಗಲಿಲ್ಲ; ಅವನ ಮನೆಯವರಿಗೆ ಗೋಳು ಮಾತ್ರ ದಕ್ಕಿತು.

“ನಾಳೆ ಸಂಜೆಯೊಳಗೆ ಮುಡೂರನನ್ನು ಜಾಮೀನಿನಿಂದ ಬಿಡಿಸಿ ತರುವುದಲ್ಲದೆ, ಈ ಕೊಲೆ ಯಾರಿಂದಾಯಿತು ಎಂಬುದನ್ನು ಹೊರಡಿಸದಿದ್ದರೆ ನಾನು ಮೀಸೆ ಹೊತ್ತದ್ದೇ ಸುಳ್ಳು” ಎಂದು ಸೆಟ್ಟರು ಪಣತೊಟ್ಟರು. ಕೆರೆಕಟ್ಟೆ ನರಸಿಂಹಯ್ಯ ಗುಟ್ಟಿನಲ್ಲಿ “ಇದು ಸಂಕಪ್ಪನ ವಹಿವಾಟಿಗಬೇಕು” ಎಂದು ಪ್ರಸಿದ್ಧ ಮಾಡತೊಡಗಿದ.



## ೧೩ ಜುವಾಂ ಸೋಜರು

ನಮ್ಮ ಊರಿಗೆ ಜುವಾಂ ಸೋಜರು ಬಂದ ಇತಿಹಾಸವೆಂದರೆ-ನಮ್ಮ ದೇಶಕ್ಕೆ ಈಸ್ಟ್ ಇಂಡಿಯಾ ಕಂಪೆನಿ ಬಂದ ಹಾಗೆಯೇ-ಎಂದು ನಮ್ಮ ಶಾಲಾ ಮಾಸ್ತರರು ಹೇಳುವುದುಂಟು. ಆದರ ಅರ್ಥ ನಮ್ಮ ಊರವರಿಗೆ ತಿಳಿಯುತ್ತ ದೆಯೋ ಇಲ್ಲವೋ, ಆದರೆ, ನಮ್ಮ ಊರಿನಲ್ಲಿ ನಾಲ್ಕು ಕಡೆಗಳಿಗೂ ಎಳೆಯು ತ್ತಿರುವ ಎತ್ತುಗಳ ಜತೆಗೆ, ಐದನೆಯ ಕಡೆಗೆ ಎಳೆಯುವ ಇನ್ನೂ ಒಂದು ಹೊಸ ಕೋಣವನ್ನು ಕಟ್ಟಿ ಹೂಡಿದ ಹಾಗಾಯಿತು.

ಹತ್ತಿಪ್ಪತ್ತು ವರ್ಷಗಳ ಹಿಂದೆ ನಮ್ಮ ಊರಲ್ಲಿದ್ದ ಮುಖ್ಯ ಜನವರ್ಗ ಎಂದರೆ ಬ್ರಾಹ್ಮಣರು; ನಾಡವರು. ಉಳಿದವರು ಇಲ್ಲ ಎಂದಲ್ಲ-ರಣಾಗ್ರಕ್ಕೆ, ಗದ್ದಲಕ್ಕೆ ಮುಖ್ಯವಾಗಿ ಇವರೇ ಬೇಕು. ಆ ಮೇಲೆ ಯುಗಧರ್ಮಕ್ಕೆ ಸಮ ನಾಗಿ, ಒಂದೊಂದು ಹೊಸ ಪಂಗಡ ಮೇಲೆದ್ದು, ಇವತ್ತಿಗೆ ಮುಡೂರ ಸಹ ಮನುಷ್ಯನಾದ ಕಥೆ ನಿಮಗೆ ಗೊತ್ತುಂಟು. ಆದರೆ ಇವರೆಲ್ಲರು ಸೇರಿದರೂ, ಇವರ ಬಲ ತಪ್ಪಿಸುವ ಪಂಗಡ ಬಂದದ್ದು, ನಮ್ಮ ಜುವಾಂ ಸೋಜರು ಬಂದ ಮೇಲೆ. ಆದರೆ ಜುವಾಂ ಸೋಜರೇ ನಮ್ಮ ಊರಿನ ಮುಖಂಡರಲ್ಲ. ಬದಲು ಕೊಯಿಲೋಪಾದ್ರಿಗಳು ಹಿಂದೆ ನಿಂತು,ಜುವಾಂಸೋಜರಿಂದತಮ್ಮಉದ್ದೇಶ ಚಲಾಯಿಸುವುದರಿಂದ, ಜುವಾಂ ಸೋಜರು ಕಾರುಭಾರಿಗಳ ಪೈಕಿ ಒಬ್ಬರು ಎನಿಸಿಕೊಂಡಿದ್ದಾರೆ.

ನಾನು ಚಿಕ್ಕವನಿರುವಾಗ ಯಾರಾದರೂ ಕ್ರಿಶ್ಚನರನ್ನು ಕಂಡರೆ ಅವರು ಕ್ರಿಶ್ಚನರು ಎಂದು ತೋರಿಸುವ ಹಂಬಲ. ಊರವರಿಗೆ ಜಿಲ್ಲಾ ಕಲೆಕ್ಟರರಾದ ಲಂಕೇಶಯರ್, ಕೋಚುಮ್ಯಾನ್ ಇವರೆಲ್ಲ ಬಂದರೆ ಹೇಗೆ ಆಶ್ಚರ್ಯವೋ, ಮೊದಲು ಮೊದಲು ನಮಗೆ ಇವರನ್ನೂ, ಇವರ ಉಡುಗೆಯನ್ನೂ ಕಂಡರೆ ಅಷ್ಟೇ ಆಶ್ಚರ್ಯ. ಈಗ ನಮ್ಮ ಊರಿನಲ್ಲಿ ಅವರ ಜನಸಂಖ್ಯೆಯೂ ಸಾಕಷ್ಟು ಏರಿದೆ. ನಿತ್ಯವೂ ಅವರನ್ನು ಕಾಣುತ್ತಿದ್ದೇವೆ.

ಮೊದಲು ನಮ್ಮ ಊರಿನ ಮಹಾಲಿಂಗೇಶ್ವರನ ಗುಡಿಯಲ್ಲಿ ಜಾತ್ರೆಯಾ ದರೆ ಗಂಗೊಳ್ಳಿಯಿಂದಲೋ, ಬಾರಕೂರಿನಿಂದಲೋ, ಕೆಲವರು ತಾಮ್ರದ ವ್ಯಾಪಾರಿಗಳು ಬರುತ್ತಿದ್ದರು. ಅಂಥವರಲ್ಲಿ ಮೊದಲಿಗೆ ಬಂದು ಕಾಣಿಸಿದ

ವರು ಜುವಾಂ ಸೋಜರು. ಸೋಜರ ಆಕಾರ ಉರುಟು. ಆಗ ಹೇಗೆ ಗುಂಡು ಗುಂಡು ಮುಖ, ಜೋಲು ಮೀಸೆಗಳಿದ್ದುವೋ ಈಗಲೂ ಹಾಗೆಯೇ ಇವೆ. ಯುರೋಪಿನ ಮಹಾ ಯುದ್ಧವು ನಡೆದು, ಹಲವು ಅರಸರು ರಾಜ್ಯ ಕಳೆದು ಕೊಂಡರೂ, ಜುವಾಂ ಸೋಜರ ಹೂವಿನ ಟೊಪ್ಪಿಯಲ್ಲಾಗಲೀ, ಚೌಳಿ ಅಂಗಿಯಲ್ಲಾಗಲಿ ಯಾವ ತಬ್ದಿಲೂ ಆಗಲಿಲ್ಲ. ಅವರು ಪೇಟೆಯಲ್ಲಿ ತಾಮ್ರದ ಗುಡಾಣ, ಕೊಪಾನ, ದಬರಿಗಳನ್ನು ರಾಶಿಹಾಕಿ ಸಾಹುಕಾರಗಿರಿ ಮಾಡಿದಾಗ ನಮ್ಮ ಊರವರಿಗೆ 'ತಮ್ಮ ಮನೆಗೇ ಕೊಪ್ಪರಿಗೆ ಬಂದ ಹಾಗೆ' ಎನಿಸಿತ್ತು. ಮೊದಲು ನಮ್ಮಲ್ಲಿಗೆ ತಾಮ್ರದ ವ್ಯಾಪಾರಕ್ಕೆ ಮುಕ್ಕಾಂ ಸಾಹೇಬರು ಬರುತ್ತಿರುವಕಾಲದಲ್ಲೇ ಇವರೂ ಬಂದರು. ಸಾಹೇಬರ ಕಲಾಯಿ ಬೆಸುಗೆ ಗಳು ನಾಲ್ಕು ದಿನ ಉಳಿಯುವುದಿಲ್ಲ—ಎಂದು ಊರವರು ಬೇಸರಿಸುವ ಕಾಲ ದಲ್ಲಿಯೇ ಇವರು ಬಂದುದರಿಂದ, ಇನ್ನೊಬ್ಬರು ಭಾರಿ ಸಾಹುಕಾರರು ನಮ್ಮ ಊರಿಗೆ ಬಂದರಲ್ಲ—ಎಂಬ ಹೆಮ್ಮೆ ಎಲ್ಲರಿಗೂ ಆಯಿತು. ಜುವಾಂ ಸೋಜರ ಬಾಯಿ, ಕೈ ಬೆಸುಗೆಗಳಿಂದ "ಈ ಪಾತ್ರೆ, ಈ ಕೋರಕೆ, ಈ ಬೋಗುಣಿ ನೀವು ತಕ್ಕೊಂಡು ಹೋಗಿ ನೋಡಿ; ನೂರು ವರ್ಷ ಬಾಳ್ತರ ಬಂದರೆ ಆಯಿತಲ್ಲ" ಎಂಬ ವಿಶ್ವಾಸ ಜನರಿಗೆ ಉಂಟಾಯಿತು.

ಸರಿ, ಬಂದ ಮೊದಲಿನ ವರ್ಷ ಅವರಿಗಾದಷ್ಟು ವ್ಯಾಪಾರ ಇನ್ನಾರಿಗೂ ಆಗಲಿಲ್ಲ. ಹೀಗೆ ನಾಲ್ಕು ವರ್ಷಗಳು ನಡೆಯುವಾಗ ನರಸ ಉಪಾಧ್ಯರು, ಸೀತ್ಯೈತಾಳರಂಥವರು ಸೋಜರನ್ನು ಕಂಡು "ಸೋಜರೇ, ವರ್ಷ ವರ್ಷವೂ ಬಂದು ಹೋಗುವ ರಗಳೆಗಿಂತ, ನಮ್ಮ ಊರಲ್ಲಿ ಒಂದು ಕಾಯಂ ಬಿಡಾರ ಮಾಡಬಾರದೇ? ಒಳ್ಳೆಯ ವ್ಯಾಪಾರವಾದೀತು-ರಸ್ತೆಬುಡದಲ್ಲಿಒಂದು ಲಾಯ ಕಟ್ಟಿ ಕುಳಿತರೆ" ಎಂದರು. ಐತಾಳರ ಸ್ನೇಹಾಚಾರದ ದಾಕ್ಷಿಣ್ಯಕ್ಕೆ ಅವರು 'ಆಯಿತು' ಎಂದರಂತೆ. ಈ ಹೊತ್ತಿನ ತನಕ ಜುವಾಂಸೋಜರ ಹತ್ತಿರ ನಮ್ಮ ಊರವರು "ಸೋಜರೇ, ವ್ಯಾಪಾರ ಚೆನ್ನಾಗಿಲ್ಲವೇ?" ಎಂದು ಕೇಳಿದರೆ, "ಏನೂ ಸ್ವಾರಸ್ಯವಿಲ್ಲ. ನಿಮ್ಮ ಊರಿಗೆ ನಾನು ಬಂದು ಒಟ್ಟು ಸಿಕ್ಕಿಬಿದ್ದೆ. ಇನ್ನು ಹಿಂದಕ್ಕೆ ಹೋಗುವುದು ನಾಲೀಸು. ಇಲ್ಲಿ ನಿಂತು, ತಾಮ್ರ ಕುಟ್ಟಿ ಜೀವನ ಸಾಗುವ ಹಾಗಿಲ್ಲ. ಒಂದೆರಡು ಮುಡಿ ಗದ್ದೆಯನ್ನಾದರೂ ಸಾಗುವಳಿ ಮಾಡ ಬೇಕು" ಎನ್ನತೊಡಗಿದರು.

ಇವತ್ತಿಗೂ ಸೋಜರ ಹತ್ತಿರ 'ವ್ಯಾಪಾರ ಹೇಗೆ?' ಎಂದು ಕೇಳಿದರೆ,

"ಮಹಾರಾಯರೇ, ಹಿರಿಯರು ಮಾಡಿಟ್ಟ ಕಾಸು ಇಲ್ಲಿ ಬಂದು ನಿಕಾಲೆಯಾಯಿತು" ಎನ್ನುತ್ತಾರೆ, ಆದರೆ ಅವರು ಬರುವಾಗ ಹಾಕಿದ ಹುಲ್ಲಿನ ಕೊಗಳು ಹೋಗಿ ಹಂಚಿನ ಉಪ್ಪರಿಗೆಯ ಮನೆ ಬಂದಿದೆ; ಆಸ್ತಿ ಕೊಂಡಿದ್ದಾರೆ; ಗೇಣಿ ವಹಿವಾಟಿದೆ; ವ್ಯಾಪಾರದಲ್ಲಿ ಬಿಡುವಿಲ್ಲ. ಪ್ರತಿವರ್ಷ ನಷ್ಟಮಾಡಿಕೊಂಡೇ ಈ ಸ್ಥಿತಿಗೆ ಅವರು ಬಂದದ್ದನ್ನು ಕಂಡರೆ ಯಾರಿಗೂ ದುಃಖವಾದೀತು.

ಜುವಾಂ ಸೋಜರ ನಾಲಿಗೆಯ ಹರಿತ ತಿಳಿದುಕೊಂಡವರು ಮೊದಲಿಗೆ ಸೀತ್ರೈತಾಳರು; ಅನಂತರ—ಆ ಹೆಸರನ್ನು ಕೇಳಿದರೆ ಕಿಡಿಕಿಡಿಯಾದವರೂ ಸೀತ್ರೈತಾಳರೇನೆ. ಅದೇನು ಕಥೆಯೆಂದು ಅವರನ್ನೇ ಕೇಳಬೇಕು. ಸೀತ್ರೈತಾಳರಿಗೆ ವಿರಾಮವಿದ್ದರೆ, ಯಾರ ಮನೆ ಜಗಲಿಯನ್ನಾದರೂ ಸೇರಿ, ಅಲ್ಲಿ ನಾಲ್ಕು ಜನರ ಮುಂದೆ ಕುಳಿತು, ತಾನು ಬಲ್ಲವನೆನ್ನುವಂತೆ ಮಾತನಾಡುವುದು ರೂಢಿ. ಹೀಗಾಗಿ ಜುವಾಂ ಸೋಜರ ಚಾವಡಿಯಲ್ಲೂ ಅವರು ಕಟ್ಟೆ, ಕಚೇರಿಗಳನ್ನು ತೊಡಗಿದರು. ನಾಲ್ಕು ಮಂದಿಯೊಡನೆ ಗಿರಾಕಿ-ಸಂಬಂಧ ಹೂಡಲಿಕ್ಕೆ ಜುವಾಂ ಸೋಜರಿಗೂ ಇಷ್ಟವೇ. ಕೊನೆಗೆ, ಸೋಜರು ಆಸ್ತಿಯನ್ನು ಕೊಳ್ಳುವ ಯೋಚನೆ ಮಾಡಿದಾಗ, ಒಬ್ಬಿಬ್ಬರ ಆಸ್ತಿಗಳಿಗೆ ಸೋಜರನ್ನು ಗಿರಾಕಿಯಾಗಿ ತಗಲಿಸಿದವರು ಐತಾಳರೇ. ಹೀಗಾಗಿ ಅವರಿಗೆ ಐತಾಳರು ಒಬ್ಬರು ಮಂತ್ರಿ ಸ್ವರೂಪರಾದರು; ಅದು ಸ್ವಲ್ಪ ಕಾಲದ ತನಕ ಮಾತ್ರ.

ಒಂದು ವರ್ಷ ನಮ್ಮೂರಲ್ಲಿ ಮಳೆಶೂನ್ಯವಾಯಿತು. ಐತಾಳರ ನಾಲ್ಕು ಮಂದಿ ಒಕ್ಕಲುಗಳೇ ಗೇಣಿಯನ್ನು ನಾಮ ಹಾಕಿದರು. ಐತಾಳರು 'ತ್ರಾಹಿ ತ್ರಾಹಿ, ಅಂದರೂ ಅವರನ್ನು ಬಿಡಲಾರೆ' ಎಂದು ಬೆಳಿಗ್ಗೆ, ಸಂಜೆ ಒಕ್ಕಲು ಮನೆಗಳ ಮುಂದೆ ಸುತ್ತಾಡತೊಡಗಿದರು. ಒಂದು ರಾತ್ರಿ-ಎಪ್ರಿಲು ತಿಂಗಳು –ಮಳೆ ತುಂಬಾ ಸುರಿದಿತ್ತು. ಐತಾಳರು ತಮ್ಮ ಒಕ್ಕಲುಗಳನ್ನು ಸಂದರ್ಶಿಸಿ, "ನಾಳೆಗೆ ಬತ್ತ ಬಿತ್ತುವ ದಿನ ಬಂತು. ನೀವು ಒಕ್ಕಲು ಬಿಟ್ಟರೆ ನಾನಾದರೂ ಗದ್ದೆ ಸಾಗುವಳಿ ಮಾಡುತ್ತೇನೆ. ಗೇಣಿ ಕೊಡದೆ ಗದ್ದೆ ಅಂಚು ಮುಟ್ಟುವ ಹಾಗಿಲ್ಲ" ಎಂದು ಅವರಿಗೆ ಬೆದರಿಸುವೆನೆಂಬ ಒಳನಗೆಯಿಂದ ಹೊರಟರು. ಕೆಳಬೈಲಿನ ಸೆರಗನ್ನು ಸೇರುತ್ತ 'ಏ ಸೇಸ' ಎಂದು ಕೂಗಿದರು. ಅಲ್ಲಿ ಸೇಸನ ಉಸಿರೇ ಇರಲಿಲ್ಲ. ಸಾಮಾನ್ಯವಾಗಿ 'ಒಕ್ಕಲುಗಳ ಮನೆಯ ಕೋಳಿ ಪಿಷ್ಠೆಯನ್ನು ಮೆಟ್ಟುವುದೇ' ಎಂದು ಹೀನಯಿಸುತ್ತಿದ್ದ ಅವರು, ಸೇಸನಿಲ್ಲದ್ದನ್ನು ನೋಡಿ, ಯೋಚನೆಯಿಂದ ಅವನ ಮನೆಯನ್ನು ಹೊಕ್ಕರು. ಅಲ್ಲಿ ಯಾರೂ

ಇದ್ದಿರಲಿಲ್ಲ. ಕೊಟ್ಟಿಗೆಯಲ್ಲಿ ಜಾನುವಾರುಗಳೂ ಇದ್ದಿಲ್ಲ. 'ಎಲಾ ಕರ್ಮವೇ!' ಎಂದು ಎರಡನೆಯ ಒಕ್ಕಲಿನ ಮನೆಗೆ ಹೋದರು; ಅಲ್ಲಿಯೂ ಯಾರೂ ಇದ್ದಿರಲಿಲ್ಲ. ಒಂದೇ ರಾತ್ರಿಯಲ್ಲಿ ನಾಲ್ಕು ಒಕ್ಕಲುಗಳು ಸುದ್ದಿಯಿಲ್ಲದೆ ಪರಾರಿ!

ಸೀತ್ಯೆತಾಳರಿಗೆ ಪಜೀತಿಗೆ ಬಂದಿತು. ಅವರಿಂದ ಅಷ್ಟೆಲ್ಲ ಸ್ವಂತ ಸಾಗುವಳಿ ಆಗದು. ಇಷ್ಟು ಕೊನೆಗೆ, ಯಾವ ಹೊಸ ಒಕ್ಕಲನ್ನು ಹುಡುಕಿ ತರುವುದು ಎಂಬ ಚಿಂತೆಗೆ ಒಳಗಾದರು. ಅದೇ ಸಂಜೆ ಅವರ ನಿತ್ಯದ ಪಟ್ಟಾಂಗ ಜುವಾಂ ಸೋಜರ ಅಂಗಡಿಯಲ್ಲಿ ನಡೆಯುತ್ತಿದ್ದಾಗ "ಈ ಒಕ್ಕಲು ಕಳ್ಳರನ್ನು ನಂಬಿ ನಾನು ಕೆಟ್ಟೆನಲ್ಲ" ಎಂದರು. ಜುವಾಂ ಸೋಜರು ತೆಗೆದ ಬಾಯಿಗೆ "ನಿಮ್ಮ ಮೊಗೇರ ಮಕ್ಕಳು ಬರ್ಕತ್ತಿಗೆ ಬಂದಾರೇ? ನಾನು ನಾಲ್ಕು ಜನ ಕ್ರಿಸ್ತಾಂ ಒಕ್ಕಲನ್ನು ಕೊಡುತ್ತೇನೆ. ಆರೇ ಆರು ತಿಂಗಳಲ್ಲಿ ನಿಮ್ಮ ಗದ್ದೆ ಚಿನ್ನವಾಗ ಬೇಕು"ಎಂದರು. "ಆದರೆ ಮಾತ್ರ ಈ ವರ್ಷದ ಮಟ್ಟಿಗೆ ಹೂಡಲು ಎತ್ತನ್ನು ನೀವೇ ಕೊಡಿಸಬೇಕು. ನಿಮ್ಮ ಚಾಲ್ತಿ ಗೇಣಿಯು ಧಾರಣೆ, ಮುಡಿ ಐಗಕ್ಕೆ ಇಳಿಸಬೇಕು. ಮುಂದೆ ಸಮನಾದ ಗೇಣಿ ಕೊಡಿಸುವ" ಎಂದರು. ಐತಾಳರಿಗೆ —ಗೇಣಿ ತಗ್ಗುತ್ತದೆ, ಎತ್ತುಗಳನ್ನೂ ತೆಗೆಯಿಸಿ ಕೊಡಬೇಕು—ಎಂಬುದು ಕಷ್ಟವಾಗಿ ಕಂಡರೂ, ಎಲ್ಲವೂ ಹೋಗುವುದಕ್ಕಿಂತ, ಗದ್ದೆಯನ್ನು ಚಿನ್ನ ಮಾಡುವ ಒಕ್ಕಲು ಬಂದರೆ ಆಗಬಹುದು ಎಂಗು ಕಂಡಿತು. 'ನಾಳೆಗೇ ಬರಲಿ' ಎಂದರು. ಸರಿ, ಎಂಟು ದಿವಸಗಳಲ್ಲಿ ಕುಟುಂಬ ಸಮೇತವಾಗಿ ಹೊಸ ನಾಲ್ಕು ಬಿಡಾರಗಳು ಬಂದುವು. ಐತಾಳರು ನಾಲ್ಕು ಮನೆಗಳಿಗೆ ಎರಡು ಜತೆ ಕೋಣಗಳನ್ನೂ ಕೊಡಿಸಿದರು. ನಗದಿಯಿಂದ, ಅವರಲ್ಲೂ ಕಾಸಿರಲಿಲ್ಲ, ಜುವಾಂ ಸೋಜರಿಗೆ ನೋಟನ್ನು ಬರೆದು ಕೊಟ್ಟು, ಅಷ್ಟು ಕೆಲಸವನ್ನು ಮಾಡಿವರು. ಮಳೆ ಬೀಳುವುದರಲ್ಲಿ ಒಕ್ಕಲು ಬಸ್ತ್ಯಾಂ, ರುಜಾರಿ, ಪೇದ್ರು,ಪಾಸ್ಕು-ನಾಲ್ಕು ಮಂದಿ, ಅವರ ಹೆಂಡಿರು, ಮಕ್ಕಳು ಬೆವರು ಸುರಿಸಿ. ಒಂದಕ್ಕೆಗಡರಷ್ಟು ಶ್ರಮಮಾಡತೊಡಗಿದರು. ಐತಾಳರ ಮನಸ್ಸಿಗೆ 'ಹೋ, ಚಿನ್ನದಂಥಾ ಒಕ್ಕಲು ಸಿಕ್ಕಿತು. ಬಿಡು ಬಿಡು ಚಿಂತೆಯ........'ಎನಿಸಿತು.

ಸರಿ, ಮೊದಲಿನ ಬೆಳೆ ಕಟಾವಾಯಿತು. ಗೇಣಿಯ ವಸೂಲಿ ಸಮಯ ಬಂದಿತು. ಹಾಗೂ ಹೀಗೂ ಮುಡಿಗೆ ಐದರಂತೆ ವಸೂಲಾಯಿತು. ಎರಡನೇ ವರ್ಷ ಐತಾಳರು "ಸೋಜರೇ-ನೋಡಿ. ಒಂದು ವರ್ಷಕ್ಕೆ ಮಾತ್ರ ಗೇಣಿ ಐದರಂತೆ ಮಾಡಿದ್ದು ;ಈವರ್ಷ ನೀವು ಎಂಟರಂತೆಕೊಡಿಸದೆ ನಿರ್ವಾಹವಿಲ್ಲ"

ಎಂದರು. ಜುವಾಂ ಸೋಜರ ಮಧ್ಯಸ್ಥಿಕೆಯಿಂದ ಬಂದ ಒಕ್ಕಲಲ್ಲವೇ? ಅವರ ಮಧ್ಯಸ್ಥಿಕೆಯಿಂದಲೇ ಎಲ್ಲವೂ ಆಗಲಿ-ಎಂದು ಐತಾಳರು ಯೋಚಿಸಿದರು. ಆದರೆ ಬಸ್ತ್ಯಾಂನಿಂದ ಪಾಸ್ಕು ತನಕ ಎಲ್ಲರೂ"ಈ ಬೆಟ್ಟು ಗದ್ದೆಯನ್ನು ನಂಬಿ, ಬಾರಕೂರಿನ ಊಂಚು ಗದ್ದೆಯನ್ನು ಬಿಟ್ಟು ಬಂದು ನಾವು ಹಾಳಾಗಿದೆವು" ಎಂದು ಸೋಜರ ಮುಂದೆಯೇ ಪಿಟಿಲು ಬಾರಿಸಿದರು.

ಸರಿ, ಎರಡನೆಯ ವರ್ಷಕ್ಕೂ ಹಳೆಯ ಗೇಣಿ ಧಾರಣೆಯೇ ನಿಂತಿತು. ಮುಂದಿನ ವರ್ಷ ಅಗೆ ಹಾಕುವ ಕಾಲಕ್ಕೆ "ನಾಲ್ಕರ ಗೇಣಿಗಿಂತ ಹೆಚ್ಚಾದರೆ ಗದ್ದೆ ನಮಗೆ ಬೇಡವೇ" ಎಂದರು. ಅಂತು ನಾಲ್ಕೈದು ವರ್ಷಗಳ ಅವಧಿಯಲ್ಲಿ ಐತಾಳರಿಗೆ 'ಜೀತು ಕುಳ ನಾಲ್ಕು ಸಿಕ್ಕಿತು; ಬಿಡಿಸಲಿಕ್ಕಿಲ್ಲ,ಬಿಡಲಿಕ್ಕಿಲ್ಲ' ಎನಿಸಿತು. ಇತ್ತ ಅವರು ಜುವಾಂ ಸೋಜರಿಂದ ಕೋಣಗಳ ಬಗ್ಗೆ ಪಡೆದ ಸಾಲವು ಚಕ್ರಬಡ್ಡಿ ಸೇರಿ ರೂ. ನೂರನಾಲ್ವತ್ತು ಆಯಿತು. ಗೇಣಿ ಬರುವುದು ಕಡಿಮೆಯಾಯಿತು. ಅಲ್ಲದೆ-ಹಾಗೆ ಹೀಗೆ, ಪಾತ್ರೆ ಪರಡಿಗಳೆಂದು, ನಗದು, ಮಣ್ಣು, ಮಾಸಣವೆಂದು ಜುವಾಂ ಸೋಜರಿಂದ ಅವರು ಪಡೆದ ಸಾಲ ಎಂಟು ನೂರಕ್ಕೆ ಏರಿತು. ಸೋಜರು, ಐತಾಳರ ಮೇಲಿನ ಹಂಗನ್ನು ಬಿಟ್ಟು ಗದರಿಸ ತೊಡಗಿದರು.

ಐದನೇ ವರ್ಷದ ಸಾಗುವಳಿ ಸಮಯ ಬಂದಿತು. ನಾಲ್ವರು ಒಕ್ಕಲೂ ಸೇರಿ, ಐತಾಳರ ಕೆರೆಯ ನೀರನ್ನು ಖಾಲಿ ಮಾಡಿದರು. ಐತಾಳರು ಗಾಬರಿಯಾಗಿ "ನಿಮ್ಮ ಅಗೆಗೆ ಇಷ್ಟು ನೀರು ಬೇಡ. ಹೀಗಿರುತ್ತ, ಕೆಳಗದ್ದೆಗಳಿಗೆ ನೀರಿಲ್ಲದಂತೆ ಮಾಡಿದರೆ ಹೇಗೆ?" ಎಂದು ಕೇಳಿದರು. "ಇಲ್ಲ,ನಾವು ಈ ವರ್ಷ ಎಲ್ಲಾ ಗದ್ದೆಗಳಿಗೂ ಅಗೆ ಹಾಕುತ್ತೇವೆ" ಎಂದರು. "ಎಲ್ಲವುದಕ್ಕೂ ಅಗೆ ಹಾಕಿ ಮಾಡುವುದೇನು" ಎಂದರೆ-"ಜುವಾಂ ಸೋಜರ ಗದ್ದೆಯ ಸಾಗುವಳಿಯನ್ನೂ ನಾವು ವಹಿಸಿಕೊಂಡಿದ್ದೇವೆ. ಅವರಿಗೆ ಸ್ವಂತದ ಅಗೇಡಿ ಇಲ್ಲ" ಎಂದರು. ಸರಿ, ಐತಾಳರು ರೇಗಿ ಮನೆಗೆ ಬಂದರು. ಆ ವರ್ಷ ಅವರ ಮನೆಯ ಸಾಗುವಳಿಯ ಅಗೆಗೆ ನೀರಿಲ್ಲ. ಜೂನಿನಲ್ಲಿ ಅವರು ಅಗೆಯನ್ನು ಬೆಲೆಗೆ ಕೊಂಡರು. ಜುವಾಂ ಸೋಜರಿಗೆ ದೂರನ್ನು ಕೊಟ್ಟರೆ, ಇವರ ಒಕ್ಕಲುಗಳ ಸುದ್ದಿಯನ್ನು ಕೇಳದೆ, ತಮ್ಮ ಹಣಕ್ಕಾಗಿ ಅವರು ಪಿಟಿಲು ಬಾರಿಸಿದರು. ಮರುವರ್ಷ ಸಂದಿತು. ಗೇಣಿ ವಸೂಲಿಗೆ ಹೋದರೆ ಪಾಸ್ಕು ಹೇಳಿದನಂತೆ-"ಎಲ್ಲಾ ಗೇಣಿಯನ್ನು ತನಗೇ ಕೊಡಬೇಕು ಎಂದು ಜುವಾಂ ಸೋಜರ ತಾಕೀತಾಗಿದೆ" ಎಂದು, ಐತಾಳರಿಗೆ

ಚಳಿ ಶುರುವಾಯಿತು. ಅವರು ದೂರನ್ನು ಒಯ್ಯಲು ಹೊಂದಾದರು. ಯಾರಲ್ಲಿ ಹೇಳಬೇಕು? ಒಂದೋ ನಾಗಯ್ಯನಿಗೆ ಹೇಳಬೇಕು. ಇಲ್ಲವಾದರೆ ಹೊಸತಾಗಿ ಬಂದಿರುವ ಕೊಯಿಲೋ ಪಾದ್ರಿಗಳಿಗೆ ತಿಳಿಸಬೇಕು. ಉಪಾಯ ಮಾಡುತ್ತೇನೆಂದು ಅವರು ತಮ್ಮ ದೂರನ್ನು ಪಾದ್ರಿಗಳ ಬಳಿಗೇ ಒಯ್ದರು. ಪಾದ್ರಿಗಳು “ಈ ಎಲ್ಲಾ ರಗಳೆ ನಿಮಗೆ ಬೇಡ; ನೀವು ಹೇಗೂ ಜುವಾಂ ಸೋಜರಿಗೆ ಹಣ ಕೊಡುವುದಕ್ಕಿದೆ; ಆಸ್ತಿ ಅವರಿಗೇ ಮಾರಿಬಿಡಿ” ಎಂದರು. ಸೀತೈತಾಳರು ತಲೆಯಮೇಲೆ ಕೈಯಿರಿಸಿಕೊಂಡು ಬಂದರು. ಒಕ್ಕಲಿನ ಹಿಂದೆ-ಅವರಿಗೆ ಕೊಟ್ಟ ಕೋಣಗಳೂ, ಆದರ ಹಿಂದೆ ಅವರಿಗೆ ಸಾಗುವಳಿಗೆ ಕೊಟ್ಟ ಗದ್ದೆಗಳೂ, ಜುವಾಂ ಸೋಜರ ಸಾಲಕ್ಕೆ ಹೋದವು.

ಜುವಾಂ ಸೋಜರನ್ನು ತಮ್ಮ ತಲೆಯ ಮೇಲಕ್ಕೆ ಕುಳ್ಳಿರಿಸಿಕೊಂಡ ಐತಾಳರು, ಈಗ ಅವರ ಪ್ರತಿಕಕ್ಷಿಗಳಾದರು. ಮುಂದೆ ಒಂದೆರಡು ವರ್ಷಗಳಲ್ಲಿ ಬೇರೊಂದು ರಣಾಗ್ರವಾಯಿತು. ಆದರಲ್ಲಿಯೂ ಜುವಾಂ ಸೋಜರ ಹೆಸರು ಮುಂದೆ ಬಂದಿತು ಅದು ನಮ್ಮ ಊರಿನ ಒಂದು ಗುಡ್ಡೆ ದರ್ಕಾಸ್ತಿನ ವಿಚಾರದಲ್ಲಿ. ಜುವಾಂ ಸೋಜರು ನಮ್ಮ ಊರಿನ ಗುಡ್ಡೆಯಲ್ಲಿ ೧೫ ಎಕ್ರೆ ಭೂಮಿ ತಮಗೆ ದರ್ಕಾಸ್ತಿಗೆ ಸಿಗಬೇಕೆಂದು ಕೇಳಿಕೊಂಡರು. ಈ ಪ್ರಸ್ತಾಪ ನೇರಾಗಿ ಬಂದರೆ, ಊರಲ್ಲಿ ಗದ್ದಲವಾದೀತೆಂದು ಅವರು ಆಗಿನ ಮಣೆಗಾರ ಕಿಸ್ತುಸೋಜರ ಮುಖಾಂತರವಾಗಿ ಅರ್ಜಿ ‘ದಬಾಯಿಸಿ’ದರು. ಅರ್ಜಿಯು ತಹಶಿಲ್ದಾರರಲ್ಲಿಗೆ ಹೋಯಿತು. ಅಲ್ಲಿಂದ ತಿರುಗಿ ಶ್ಯಾನುಭಾಗರಲ್ಲಿಗೆ ತನಿಖೆಗೆ ಬಂತು. ಅರ್ಜಿ ಹೊತ್ತಿರುವ ಆಶೀರ್ವಾದಗಳ ದೆಸೆಯಿಂದಾಗಿ ಶ್ಯಾನುಭಾಗ ಭವಾನಿರಾಯರಿಗೆ—ತಾನು ಅಚೆಯೋ, ಈಚೆಯೋ ಎನ್ನುವ ಅನುಮಾನ ಬಂದಿತು. ಅವರು, ಎದುರಿಗೆ ತಾನಿದ್ದೇನೆ ಎಂದು ತೋರಿಸದೆ, ಸಂಗತಿಯನ್ನು ನಾಗಯ್ಯ ಸೆಟ್ಟರಿಗೂ, ಐತಾಳರು ಮೊದಲಾದವರಿಗೂ ತಿಳಿಸಿದರು. ಕೂಡಲೇ ನಾಲ್ಕಾರು ಆಕ್ಷೇಪದ ಅರ್ಜಿಗಳೂ, ಕೆಲವು ತಳ್ಳಿ ಅರ್ಜಿಗಳೂ ಹೊರಟವು. ‘ಗೋಚರಾವಿನ ಸ್ಥಳ ಅದು’ ಎಂಬ ಊರವರ ತಕರಾರುಗಳು ಬಂದುವು. ಒಂದು ವರ್ಷಕಾಲ ಅರ್ಜಿ ನಿದ್ರಿಸಿದಂತಾಗಿ ಎಲ್ಲರಿಗೂ ಸಂತೋಷವಾಯಿತು.

ಮುಂದಿನ ವರ್ಷ ಮಳೆಗಾಲದಲ್ಲಿ ಜುವಾಂ ಸೋಜರು ಆ ಸ್ಥಳಕ್ಕೆ ಅಗಳನ್ನು ಹಾಕಿಸಿದರು. ಗೇರುಬೀಜದ ಸಸಿಗಳನ್ನೂ ಅಲ್ಲಿ ನೆಟ್ಟರು. ತಿರುಗಿ ಊರವರ ತಕರಾರು ಹೋಯಿತು. “ಜುವಾಂ ಸೋಜರಿಗೆ ಅದು ಸಿಗಲೇ

ಕೊಡದು; ಕೊಡುವುದಾದರೆ ಸುತ್ತಲೂ ತಮ್ಮೆಲ್ಲರಿಗೆ ಲಗ್ತು ಸ್ಥಳವಿರುವುದರಿಂದ ಅದು ನಮಗೇನೆ ಬರತಕ್ಕದು" ಎಂದು ಜನರು ವಾದವನ್ನು ಹೂಡಿದರು. ಈ ತಕರಾರುಗಳೆಲ್ಲ ನಡೆಯುತ್ತಿದ್ದಾಗಲೇ, ಆ ಜಮೀನಿನಲ್ಲಿ ದರೆಗಳ ಮೇಲೆ ದರೆಗಳೂ, ಗುಡಿಸಲುಗಳ ಮೇಲೆ ಗುಡಿಸಲುಗಳೂ ಆಗುತ್ತಿದ್ದುವು. 'ಈ ಸ್ಥಳಗಳು ಡಿಪ್ರೆಸ್ಡ್ ಕ್ಲಾಸ್ ಜನರಿಗೆ ಕೊಡಲ್ಪಟ್ಟಿವೆ' ಎಂಬ ಸುದ್ದಿ ಪ್ರಕಟವಾಯಿತು. ಊರವರ ತಕರಾರುಗಳು ತಿರುಗಿ ವ್ಯರ್ಥವಾದುವು.

ಮುಂದಿನ ವರ್ಷದೊಳಗೆ ಅಲ್ಲಿ ಬಾವಿ, ಬಾಳೆ, ತೆಂಗುಗಳೆಲ್ಲ ಮೂಡಿದುವು. ಹತ್ತೆಂಟು ಆದಿದ್ರಾವಿಡ ಕ್ರಿಶ್ಚನ್ ಮನೆಗಳೂ ಅಲ್ಲಿ ಕಾಣಿಸಿಕೊಂಡುವು. ಅದರ ಮರುವರ್ಷ ಒಂದು ಸಣ್ಣ ಇಗರ್ಜಿಯೂ ಕಾಣಿಸಿಕೊಂಡಿತು. ಈಗ ಆ ಜಾಗ ಜುವಾಂ ಸೋಜರಿಗೆ ಹರಿಜನರಿಂದ ಅಡವು; ಜುವಾಂ ಸೋಜರಿಂದ ಅದು ಇಗರ್ಜಿಗೆ ಗೇಣಿಯಂತೆ. ಅಂತು ವಾಸ್ತವವಾಗಿ ಯಾವತ್ತು ಪಾರುಪತ್ಯ ಹೊಸತಾಗಿ ಬಂದ ಪಾದ್ರಿಗಳಾದ ರೆವರೆಂಡ್ ಕೊಯಿಲೋ ಇವರದ್ದಾಯಿತು.

ಕೊಯಿಲೋ ಪಾದ್ರಿಗಳು ಬರುವ ತನಕ ಜುವಾಂ ಸೋಜರು ಊರವರ ಪಂಗಡದಲ್ಲಿ ಸೇರಿದ್ದರು. ಕೊನೆಗೆ ಅವರ ಪಂಗಡವೇನೆ ಬೇರೆಯಾಯಿತು-ಪಾಸ್ಕು, ಬಸ್ತ್ಯಾಂರೆಲ್ಲರು ಬಂದ ಬಳಿಕ ಅವರೀಗ ಸ್ವತಃ ಧನಿಯಾಗಿದ್ದಾರೆ. ಬಹಿರಂಗವಾಗಿ 'ತನಗೆ ಯಾರ ಮುಲಾಜೂ ಇಲ್ಲ' ಎನ್ನುತ್ತಿದ್ದಾರೆ. ಅವರ ಒಂದು ಮನೆಯಿದ್ದುದು ಹೋಗಿ ಮೂವತ್ತಕ್ಕೆ ಕಡಿಮೆ ಇಲ್ಲದಷ್ಟು ಕ್ರಿಶ್ಚನರ ಗುಡಿಸಲುಗಳು ಉಂಟಾಗಿವೆ. ಹಾಗಾಗಿ ಕೊಯಿಲೋ ಪಾದ್ರಿಗಳು ನಮ್ಮ ಊರಿನಲ್ಲಿ ನೆಲೆಸಿ ಅವರ ಧರ್ಮವನ್ನು ಕಾಯುತ್ತಿದ್ದಾರೆ. ಹಾಗಿರಲು ಜುವಾಂ ಸೋಜರ ಪಂಗಡ ಕೊಯಿಲೋ ಪಾದ್ರಿಗಳ ಪಂಗಡವಾಗಲೇ ಬೇಕಷ್ಟೆ. ನಮ್ಮ ಊರಿಗೆ ಇದರಿಂದ ಹೊಸ ಕಳೆಕಟ್ಟಿದೆ.

ಕೊಯಿಲೋ ಪಾದ್ರಿಗಳು ತುಂಬ ಸಾಹಸಿಗಳು. ಅವರು ನಮ್ಮೂರಿಗೆ ಬಂದು, ಬರಿಯ ನಾಲ್ಕಾರು ವರ್ಷದಲ್ಲಿ ಭಾರೀ ಒಂದು ಇಗರ್ಜಿಯಾಯಿತು. ಹಿಂದಿನ ಡಿಪ್ರೆಸ್ಡ್ ಜನರ ದರ್ಖಾಸ್ತುಗಳೆಲ್ಲವೂ, ತೆಂಗು, ಮಾವು, ಹಲಸು, ಗೇರುಮರಗಳ ತೋಟಗಳಾಗಿವೆ. ಯಾವಾಗಲೂ ಗುಡ್ಡೆಗಳನ್ನು ಅಗೆಪಗೆದು ಗದ್ದೆ ಮಾಡುತ್ತಿದ್ದಾರೆ. 'ಮೂರು ವರ್ಷದ ಮಗುವೂ ಅಲ್ಲಿ ಮಣ್ಣು ಹೊತ್ತು ಗದ್ದೆ ಮಾಡುತ್ತಿದೆ' ಎಂದು ಐತಾಳರು ಹೇಳುತ್ತಾರೆ. ಅಲ್ಲದೆ ಕೊಯಿಲೋ ಪಾದ್ರಿಗಳು ಒಳ್ಳೆಯ ಹಣದ ವಹಿವಾಟನ್ನೂ ಬಲ್ಲವರು. ಊರಿನ ಯಾವ

ಆಸ್ತಿಯೂ ಹಾಳುಬೀಳದಂತೆ ನೋಡುತ್ತಿದ್ದಾರೆ. ಅವರ ಅಣ್ಣನ ಹೆಸರಲ್ಲಿ ಇಂಥ ಹಲವು ಜಮೀನನ್ನು ಕೊಂಡುಕೊಂಡಾಯಿತು. ಅಲ್ಲದೆ ಊರಲ್ಲಿ ಸಾಮಾನ್ಯರಾದವರು ಅವರಿಂದ ಸಾಲ ಪಡೆಯದೆ ಇಲ್ಲ. ಸಾಲ ಬೇಕಾದವರು ಜುವಾಂ ಸೋಜರ ಮುಖಾಂತರವಾಗಿ ಪಾದ್ರಿಗಳಲ್ಲಿಗೆ ಹೋಗುತ್ತಾರೆ. ಎಂದ ಮೇಲೆ ಜುವಾಂ ಸೋಜರ ಭರಾಮು ಊರಲ್ಲಿ ತನ್ನಂತೆಯೇ ಹೆಚ್ಚಲಿಲ್ಲವೆ?

ಈಗ ಜುವಾಮರು ಜವಳಿ ಅಂಗಡಿ ತೆರೆದಿದ್ದಾರೆ. ಅಂಗಡಿ ಜಗುಲಿಯ ಮೇಲೆ ಹಗಲು ರಾತ್ರಿ ಸಿಂಗರು ಮೆಶಿನುಗಳು ಕಿಟಿಕಿಟಿ ಅನ್ನುತ್ತಲೇ ಇವೆ. ಆದರೆ ಅದಾದರೂ ಆದೀತು, ಅವರ ತಾಮ್ರದಂಗಡಿಯ 'ಕೊಟಂ ಕೊಟ್ಟ' ಬೇಡವಂತೆ. ಜುವಾಮರ ವಿಚಾರ ಕೇಳಲು ಕೆರೆಕಟ್ಟೆ ನರಸಿಂಹಯ್ಯನನ್ನು ಮಾತನಾಡಿಸಲೇಬೇಕು. ನಮ್ಮ ನರಸಿಂಹಯ್ಯನಿಗೆ ಅವರ ಮೇಲೆ ಅಂಥಿಂಥ ಸಿಟ್ಟಿಲ್ಲ; ಮೊದಲಿನ ಸಿಟ್ಟು—ಮುಡೂರನನ್ನು 'ತಲೆಬೋಳಿಸಲು ಕರೆದುದಕ್ಕೆ'. ಅವರು ಮುಡೂರನನ್ನು ಕರೆದು "ನೋಡು ಮುಡೂರ; ನಮ್ಮ ಇಗರ್ಜಿಗೆ ಬಾ. ನಮ್ಮ ಗುರುಗಳು ಎಷ್ಟೊ ಜನ ನಿಮ್ಮವರನ್ನು ಉದ್ಧಾರಮಾಡಿದ್ದಾರೆ; ನೋಡು: ಎಲ್ಲರಿಗೂ ಈಗೊಂದೊಂದು ಸ್ವಂತ ಮನೆಯಿದೆ. ಕೆಲಸಕ್ಕೆ ಯಾರೂ ಘಟ್ಟಕ್ಕೆ ಹೋಗಬೇಕಾಗಿಲ್ಲ" ಎಂದು ಬೋಧಿಸತೊಡಗಿದರು. ಅವನ ಮನಸ್ಸು ತಿರುಗುತ್ತಿತ್ತು. ಆದರೆ ಸಂಗತಿ ನರಸಿಂಹಯ್ಯನಿಗೆ ತಿಳಿಯಿತು. ಅವನು ಓಡಿಬಂದು "ಮುಡೂರ, ಸಾಯುವ ಕಾಲಕ್ಕೆ ನೊಣ ತಿಂದು ಜಾತಿ ಬಿಟ್ಟ--ಎಂಬ ಹಾಗೆ ಮಾಡುತ್ತೀಯಾ! ನೀನಿದ್ದ ಜಾಗದ ಗೇಣಿಯನ್ನು ನಾನು ಕೇಳಿದ್ದೇನೆಯೇ? ಈಗ ನಿನ್ನ ಇಷ್ಟ ಬಂದಂತೆ ಇದ್ದೀಯ ನೀನು. ಇಗರ್ಜಿಗೆ ಹೋದ ಬಾಡುವಿನ ಕಥೆಯೇನಾಯಿತು? ಅವರು ಎರಡಾಣೆ ಕೊಟ್ಟರೂ ಸಂಬಳ; ಕೊಡದಿದ್ದರೂ ಸಂಬಳವೇ! ಕೊನೆಗೆ ಬಾಡು ಓಡಿಹೋದದ್ದು ಗೊತ್ತಿಲ್ಲವೇ ನಿನಗೆ" ಎಂದ, ಬಾಡು ಪಾದ್ರಿಯ ಮತಕ್ಕೆ ಸೇರಿ, ಇಗರ್ಜಿ ಸುತ್ತಲಿನ ಗುಡ್ಡ ಕಡಿದು, ಇಳಿಸಿ, ಇಳಿಸಿ ದಣಿದವನು. ಈ ಅವನ ಠಿಕಾಣೆಯನ್ನೇ ಕಾಣೆವು. ಆದರೆ "ನಿನ್ನ ದೇವರನ್ನು ನಂಬಿದರೆ ಸ್ವರ್ಗವಿಲ್ಲ" ಎಂದು ಜುವಾಂಸೋಜರು ಖಾತ್ರಿಯಾಗಿ ಹೇಳಿದ್ದಾರೆ. ಕ್ರಿಶ್ಚನರ ಉತ್ಸವಗಳನ್ನು ಕಂಡು ಮುಡೂರ ಮೆಚ್ಚಿದ್ದಾನೆ. ಸಾಲದುದಕ್ಕೆ 'ಹೊಲೆಯನಾಗಿಯೇ ಬಿದ್ದಿರಬೇಕು' ಎಂಬ ಚಿಂತೆಯಿದೆ. ನರಸಿಂಹಯ್ಯನಿಗೆ ಅವನ ಈ ಸಂಶಯವೂ ತಿಳಿಯಿತು. ಸಮಾಧಾನವಾಗಿ ಅವರು—"ಸ್ವರ್ಗಕ್ಕೆ ಅವರು ಹೋಗಲೂ ಇಲ್ಲ, ನಾನೂ ಹೋಗಲಿಲ್ಲ. ಹೋಗಿ

ಬಂದವರಿದ್ದರೆ ಅದು ಹ್ಯಾಗಿದೆಯೆಂದು ತಿಳಿದು, ಆ ಮೇಲೆ ಅವರ ಜಾತಿಗೆ ಸೇರುವ; ಬೇಕಾದರೆ ಜತೆಗೆ ನಾನೂ ಬರುತ್ತೇನೆ. ಮತ್ತೆ-ಹೊಲೆಯರಿದ್ದವರು ಕ್ರಿಶ್ಚನನಾದರೂ, ಅವರನ್ನು ಇನ್ನು ಬೇರೆಯೇ ಒಂದು ಜಾತಿಯಾಗಿ ಇರಿಸುತ್ತಿದ್ದಾರೆ. ಉಳಿದವರಿಗೂ ಅವರಿಗೂ ಯಾವ ಹೆಣ್ಣು ಗಂಡೂ ನಡೆಯುವುದು ಕಾಣುವುದಿಲ್ಲ. ಹೀಗಿರುತ್ತ ನಿನಗೆಏಕೆ ಈ ಮರುಳು?"ಎಂದು ಉಪದೇಶಿಸಿದ

ಸರಿ, ಮುಡೂರನ ಮನಸ್ಸು ತಿರುಗಿತು. ಜುವಾಂ ಸೋಜರು ಹತಾಶರಾದರು. 'ನರಸಿಂಹಯ್ಯನಿಗೆ ಬುದ್ಧಿ ಕಲಿಸುತ್ತೇನೆ' ಎಂದು ಯೋಚಿಸಿದರು. ನರಸಿಂಹಯ್ಯನಿಗೆ ಯಾರಿಂದಲೋ ನೂರು ರೂಪಾಯಿ ಬರುವುದಿತ್ತು, ಅವರ ಜವಾಬುದಾರಿಯನ್ನು ಸೋಜರು ಹೊತ್ತರು. ನರಸಿಂಹಯ್ಯ ಸಾಲಗಾರನನ್ನು ಸಿವಿಲು ಜೈಲಿಗೆ ರವಾನಿಸಿಯೇ ಶುದ್ಧ ಎಂದು ಪಣತೊಟ್ಟ. 'ಛೇ... ಛೇ ಅವನು ಬಡವ, ನಾನು ನಿಮಗೆ ಜಾಮೀನು' ಎಂದು ಯಾರಿಂದಲೋ ಹೇಳಿಸಿ ಬಿಡಿಸಿದರು. ಆರು ತಿಂಗಳುಕಳೆದರೂ ಅವನಿಂದ ಹಣವಿಲ್ಲ;ಜುವಾಂರಿಂದಲೂ ಕಾಸಿಲ್ಲ. ಕೇಳಿದರೆ "ಅದನ್ನು ಕೊಡಬೇಕಾದರೆ ಪಾದ್ರಿಗಳನ್ನು ಕೇಳಬೇಕು" ಎಂದರು. ಅಂದರೆ ಮೂಲಸಾಲದವನಿಂದ ಪಾದ್ರಿಗಳಿಗೂ ನೂರುರೂಪಾಯಿ ಬರುವುದಿತ್ತಂತೆ. "ನಾನು ಅವನ ಬಗ್ಗೆ ಹಣ ಕೊಡುವುದಾದರೆ ಅದು ಪಾದ್ರಿಗಳಿಗೇನೆ ಸಲುವುದು ನ್ಯಾಯ. ನಿಮ್ಮ ಸಾಲ ಅನಂತರವಲ್ಲವೆ?" ಎಂದರು. ಸರಿ-ನರಸಿಂಹಯ್ಯನ ಉಗ್ರ ಹೆಚ್ಚಿತು. ಅದರಿಂದಾದದ್ದು ಏನಿಲ್ಲ, ನೂರು ರೂಪಾಯಿಗೆ ಖಾರ.

ಇಷ್ಟೆಲ್ಲಾ ಜುವಾಂ ಸೋಜರ ಇತಿಹಾಸ ನಡೆಯುತ್ತಿರುವಾಗಲೇ ಈ ಕಾಂಗ್ರೆಸು ಕಾಳಗ ಪ್ರಾರಂಭವಾದ್ದು. ಕೊಯಿಲೋ ಪಾದ್ರಿಗಳು ಎಲ್ಲ ಕ್ರಿಶ್ಚನರಿಗೂ 'ನಿಮಗೆ ಈ ಖಾದಿ ಟೊಪ್ಪಿ ಬೇಡ' ಎಂದು ಉಪದೇಶಿಸಿದ್ದರು. ಆದರೆ ಈಗಾಗಲೇ ಕಾಂಗ್ರೆಸಿನ ಹೆಸರಿನಲ್ಲಿ ಅವರೂ, ಇವರೂ ಖರ್ಚಿಲ್ಲದೆ ಬೋರ್ಡಿನೊಳಗೆ ನುಸುಳಿದ ವಾರ್ತೆಗಳನ್ನು ಕೇಳಿ ತಿಳಿದು, ಜುವಾಮರನ್ನು ಬೋರ್ಡು ಮೆಂಬರಿಕೆಗೆ ಏರಿಸುವ ಯೋಚನೆ ಮಾಡಿದರು. ಅದರಿಂದ ಜುವಾಂ ಸೋಜರ ಅನಾದಿಯ ತಮ್ಮ ಉರುಟು ಟೋಪಿಯನ್ನು ಕೆಳಗಿರಿಸಿ, ಖಾದಿ ಟೋಪಿಯನ್ನಿಟ್ಟುಕೊಂಡು, ಮೊದಲಿಗೆ ಕಾಂಗ್ರೆಸು ಕಮಿಟಿ ಅಧ್ಯಕ್ಷರಾಗುವ ಯೋಚನೆ ಮಾಡಿದ್ದಾರೆ. ಪಾದ್ರಿ ಸಾಹೇಬರ ಒಲವೆಲ್ಲವೂ ಅವರ ಕಡೆಗೇನೆ ಇದೆ. ಪಾದ್ರಿಗಳಿಂದ ಸಾಲ ಪಡೆದವರಲ್ಲರಿಗೂ 'ಜುವಾಂ ಸೋಜ

ರನ್ನು ಬಿಟ್ಟು ಹಾಕಕೂಡದು. ನಿಮ್ಮ ಊರಲ್ಲಿ ಒಂದು ಸಂಕವೋ, ರಸ್ತೆಯೋ ಮತ್ತೊಂದೋ ಆಗಬೇಕಾದರೆ; ಅವರು ಹೆಸರಿಗೆ ಮಾತ್ರ ಮುಂದಿದ್ದರೆ. ನಾನು ಅವರಿಂದ ಬೇಕಾದ ಕೆಲಸವನ್ನು ಮಾಡಿಸಿಯೇನು' ಎಂಬ ಜಣ್ಣೆಯಂಥ ಮಾತನ್ನಾಡುತ್ತಿದ್ದಾರೆ.

ಇದರಲ್ಲಿ ಉಳಿದವರಿಗೆ ಹೆಚ್ಚಿನ ತೊಂದರೆಯಿಲ್ಲ. ಜನ್ನ ಪೈಗಳೂ, ಮತ್ತು ನಾಗಯ್ಯ ಸೆಟ್ಟರೂ ತುಸು ಯೋಚನೆಗೆ ಈಡಾಗಿದ್ದಾರೆ. ಜನ್ನ ಪೈಗಳು ಬಹಿರಂಗಕ್ಕೆ ಬರುವುದಾದಲ್ಲಿ ನಾಗಯ್ಯನ ಹೇಳಿಕೆಯಂತೆ ಇರಬೇಕೋ ಏನೋ. ಜುವಾಂ ಸೋಜರು—"ನಾನೂ ಜೀನಸಿನ ಅಂಗಡಿ, ಬಂಡಸಾಲೆ ಇಡುತ್ತೇನೆ" ಎಂದು ಬೆದರಿಸಿದರೆ 'ಮುಂದೇನು ಗತಿ' ಎಂಬ ಅಂಜಿಕೆ ಇವರಿಗೆ! ಇತ್ತ ನಾಗಯ್ಯ ಸೆಟ್ಟರೂ, ಹೇಳಲಾರದ ಒಂದು ವಿಷಯದಲ್ಲಿ ಕೊಯಿಲೋ ಪಾದ್ರಿಗಳ ಬೆರಳೊತ್ತಿಗೆ ಬಲಿಯಾಗಿದ್ದಾರೆ-ಎಂದು ವದಂತಿಯಿದೆ. ಹೀಗಾಗಿ ನಮ್ಮ ಊರಿನ ಕಾಂಗ್ರೆಸು ಗಲಾಟೆ ಯಾವ ರೀತಿಯಲ್ಲಿ ಕೊನೆಗೊಂಡೀತು ಎಂದು ಆ ಪರಮಾತ್ಮನಿಗೇನೆ ಗೊತ್ತು.



# ೧೪. ಮೂಸೆ ಬ್ಯಾರಿ

ಹೊಗೆಸೊಪ್ಪಿನ ವ್ಯಾಪಾರಿ ಮೂಸೆ ಬ್ಯಾರಿಯೆಂದರೆ ಭಾರೀ ಮನುಷ್ಯ ಅವನು ನಮ್ಮೂರಿಗೆ ಬಂದಾಗ 'ಚೀಂಕು ಚೀಂಕಾಗಿ' ಇದ್ದರೂ, ಈಗ ಬರಾಬ್ಬರಿ ಧಾಂಡಿಗನಾಗಿ ಕಾಣಿಸುತ್ತಾನೆ. ಮೈಬಿಟ್ಟು ತಿರುಗಾಡುವ ಪದ್ಧತಿ ಅವನದು. ಉಡಲು ಲುಂಗಿ ನಡುವಿಗೆ ಡಬ್ಬಲ್ ಪಾಕೀಟಿನ 'ಬೆಲ್ಟು', ಅದಕ್ಕೆ ಸಿಕ್ಕಿಸಲು ಚೂರಿಯೊಂದು. ತೋಳಿಗೆ ತಾಯಿತು; ತಲೆಯ ಮೇಲೆ ಪೇಟೆಂಟು ಮಾಪಿಳ್ಳಾ ಟೋಪಿ. ಬ್ಯಾರಿಗಳು. ಸಾಹುಕಾರರಾದ ಬಳಿಕ ಟೋಪಿಯ ಹೊರಗಡೆ ಒಂದು ಶಲ್ಲೆಯನ್ನು ಸುತ್ತುತ್ತಾರೆ.

ನಮ್ಮೂರಿನಲ್ಲಿ ಮಾಪಿಳ್ಳೆಯರು ಬೇರೂರಿ ಹತ್ತು ವರ್ಷ ಸುಮಾರಾಯಿತು; ಇಲ್ಲಿಗೆ ಕ್ರಿಶ್ಚನರು ಬರುವ ಮೊದಲೇನೆ ಬಂದವರು. ಸಾಮಾನ್ಯ ಅವರ ಪಟಾಲಮು-ಮಳೆ ಮುಗಿದೊಡನೆಯೇ ಭಟ್ಕಳ ಪ್ರಾಂತ್ಯಕ್ಕೆ ಸಾಲು ಸಾಲಾಗಿ, ಓಲೆ ಹೇಟು ಧರಿಸಿ ಹೋಗುವುದನ್ನು ಚಿಕ್ಕಂದಿನಲ್ಲಿ ಕಂಡ ನೆನಪು. ಅದರಲ್ಲಿಯ ಕೆಲವರು, ನಮ್ಮ ಬೆಂಗರೆಗೆ ಮೀನಿನ ವ್ಯಾಪಾರಕ್ಕಾಗಿ ಬಂದು ಹೋಗುತ್ತಿದ್ದರು. ಅಂಥವರೊಡನೆ ಸೇರಿಕೊಂಡು, ಮೂಸೆ ಬ್ಯಾರಿ ೧೬ ವರ್ಷದ ಹುಡುಗನಾಗಿದ್ದಾಗ ನಮ್ಮೂರಿಗೆ ಬಂದ. ದೊಡ್ಡ ಮೀನಿನ ವ್ಯಾಪಾರಿಗಳೆಂದು ಹೆಸರಾದ ಶೇಕುಬ್ಯಾರಿಗಳ ಪರಿಚಾರಕನಾಗಿ ಬಂದವನು. ಎರಡು ಮೂರು ವರ್ಷವೂ ನಮ್ಮೂರಿಗೆ ಬಂದು ಹೋಗುವ ಪರಿಪಾಠ ಇರಿಸಿಕೊಂಡ. ಕೊನೆಗೇಕೋ ಪಾರತಂತ್ರ್ಯ ಬೇಡವೆಂದು, ಕಾಂಜರಗೋಡಿನಿಂದ ಹೊಗೆಸೊಪ್ಪು ತಂದು, ಸ್ವತಂತ್ರ ವ್ಯಾಪಾರವನ್ನೇ ಮಾಡತೊಡಗಿದ. ಈ ವ್ಯಾಪಾರದಲ್ಲಿ ಸರಾಸರಿ ಮೂರು ನಾಲ್ಕು ವರ್ಷಗಳ ತನಕ ಅವನಿಗೆ ಎದುರಾಳಿಗಳು ಇದ್ದಿರಲಿಲ್ಲ. ಅಲ್ಲದೆ ನಮ್ಮ ಊರಿನ ಜನ್ನ ಪೈಗಳಂಥವರೂ ಹೊಗೆಸೊಪ್ಪಿನ ರಖಂ ಗಿರಾಕಿಯಾದರು. ವ್ಯಾಪಾರವೂ ನಡೆಯಿತು. "ಏನೋ ಅಲ್ಲಾನ ದೆಸೆಯಿಂದ ನಸೀಬು ಖುಲಾಯಿಸಿತು. ಪಳ್ಳಿಕೆರೆಯಲ್ಲಿ 'ಪುಗ್ಗೆರೆ' ಆದರೆ ನಿಮ್ಮ ಬೆಂಗ್ರೆಯಲ್ಲಿ ಪುಗ್ಗೆರೆ ಆಗಬಾರದೇಕೆ?" ಎಂದು ಧೈರ್ಯಮಾಡಿ ಮೂಸೆಯು ಒಂದು ವರ್ಷ ನಮ್ಮೂರಲ್ಲಿ ೧೦ ಎಕ್ರೆ ಭೂಮಿಯಲ್ಲಿ ಹೊಗೆಸೊಪ್ಪನ್ನು ಬೆಳೆಯಿಸಿದ. ಅದಕ್ಕೆ ನೀರೆರೆಯುವ ಮಾಪಿಳ್ಳೆ ಹುಡುಗರು

ನಾಲ್ವರನ್ನು, ಇಪ್ಪತ್ತು ಗಡಿಗೆಗಳ ಸಹಿತವಾಗಿ, ಕಾಸರಗೋಡಿನಿಂದಲೋ, ಪಳ್ಳಿಕೆರೆಯಿಂದಲೋ ಆತ ಕರೆದು ತಂದ.

ಆಗ ನಮ್ಮ ಊರವರೆಂದರು-"ಬ್ಯಾರಿಗೆ ಅತಿ ಆಸೆ; ಕಾಸರಗೋಡಿನಲ್ಲಿ ಹೊಗೆಸೊಪ್ಪು ಬೆಳೆಯಿತೆಂದು ಇಲ್ಲಿನ ನೆಲದ ಗುಣಕ್ಕೆ ಅದು ಬೆಳೆದೀತೇ" ಎಂದು ನಕ್ಕರು. ಮೂಸೆಗೆ ಜನರ ಹಣೆಯ ಬರಹ ಚೆನ್ನಾಗಿ ಗೊತ್ತು:"ನಿಮಗೆ ಬೆಳೆದು ತೋರಿಸಿದರಾಯಿತಲ್ಲ"ಎಂದು ಆತ ಪರಿಹಾಸ್ಯ ಮಾಡಿದ. ಆ ವರ್ಷ ಊರಲ್ಲಿ ಮೀನೆಣ್ಣೆ ಗಾಣಗಳು ವಿಪರೀತ ಬಿದ್ದುವು. ಮೀನಿನ ಜೊಗಟೆಗೆ ಕಸಕ್ಕಿಂತಲೂ ಕಡಿಮೆ ಬೆಲೆಯಾಯಿತು, ಮೊಗೇರ ಅಣ್ಣು ಹೇಳುವ ಹಾಗೆ-'ಈ ಬ್ಯಾರಿಗಳು, ಚಡಾಯಿಸಿ ಮೀನುಗೊಬ್ಬರ ಹಾಕಿದರು! ಅಬ್ಬಾ ಒಂದೊಂದು ಹೊಗೆಸೊಪ್ಪಿನ ಎಸಳು ಎಂದರೆ ಆನೆ ಕಿವಿ ಹಾಗೆ' ಆಯಿತಂತೆ. ಆ ವರ್ಷ ನಿಜಕ್ಕೂ ಬಲು ಹುಲುಸಾದ ಪೈರು ಬಂದಿತ್ತು, ಈಗ ಕಾಯಂ ೧೦-೨೦-೩೦ ಎಕ್ರೆ ಎಂದು ಬ್ಯಾರಿಗಳು ಹೊಗೆಸೊಪ್ಪನ್ನು ಬೆಳೆಯಿಸುತ್ತಿದ್ದಾರೆ; ಅಲ್ಲದೆ ಚಾಲಗೇಣಿ ಗದ್ದೆಗಳಲ್ಲಿ ಹಲವು ಅವರ ಸ್ವಂತ ಹೆಸರಿಕೆ ಒಂದೊಂದಾಗಿಯೇ ಸೇರುತ್ತ ಬಂದಿವೆ. ಬ್ಯಾರಿ 'ಬ್ಯಾರಿಗಳು' ಎನಿಸುವ ಪದವಿಗೇರಿದರು.

ವ್ಯಾಪಾರದಲ್ಲಿ ಮೂಸೆ ಬ್ಯಾರಿಗಳು ಸಾಮಾನ್ಯರನ್ನು ಬಿಟ್ಟುಕೊಡುವ ಕುಳುವಲ್ಲ. ನಮ್ಮ ಅನಂತ ಪ್ರಭುವಿನ ಅಂಗಡಿಯಲ್ಲಿ ಒಂದು ಸಿಂಗಲ್ ಚಾ ಹೊಡೆದರೆ, ರಾತ್ರಿ ಹತ್ತು ಘಂಟೆಯ ತನಕ ಇನ್ನೇನೂ ಬೇಡ. ಕೆಲಸ ಮಾಡು ವಂಥ ಗಟ್ಟಿಗರು. ಬ್ಯಾರಿಗಳ ಮನೆ ಬಿಡಾರ ಸಹಿತವಾಗಿ ಪೇಟೆಗೆ ತುಸು ದೂರದಲ್ಲಿದೆ. ಎರಡೇ ಅಂಕಣದ ಮನೆ; ೧೦ ಸೆಂಟ್ಸ್ ಜಾಗದಲ್ಲಿ—ಒಂದು ಬಾವಿ, ಹಿತ್ತಿಲಲ್ಲಿ ಒಂದೂ ಗಿಡವಿಲ್ಲ. ಗಿಡ ಕಡಿಮೆಯಾದರೂ ಆಡುಗಳು ತಪ್ಪಿದ ಅಂಗಳವಲ್ಲ. ಆಡಿನ ಮೇವು ನೆರೆಕರೆಯ ಹಿತ್ತಿಲಿನಿಂದ ತನ್ನಂತೆಯೇ ಬರುತ್ತದೆ. 'ಬ್ಯಾರಿಗಳ ಮನೆಯಲ್ಲಿ ಹೊಗೆ ಹೊರಟದ್ದನ್ನು ನಾನು ನೋಡಿಲ್ಲ' ಎಂದು ಅವರಚೌಕಾಶಿಯನ್ನು ಕುರಿತುಚೇಷ್ಟೆಮಾಡುವವರೂ ಇದ್ದಾರೆ.ಆದರೆ ಬ್ಯಾರಿಗಳ ಹಂಗು ಇಲ್ಲದವರು ಕಡಿಮೆ. ಅವರು ಜನ್ನ ಪೈಗಳಿಗೆ, ಅಂಗಡಿ ಜವಾಬುದಾರಿಯ ಮೇಲೆ ೫೦೦೦ ಸಾಲ ಕೊಟ್ಟಿದ್ದಾರೆ-ಎಂಬ ವದಂತಿ ಇದೆ.

ಇನ್ನು ಈಗೀಗ ಅಡಿಕೆಕಾಯಿ, ಸೀಗೆಕಾಯಿ, ಕಾಜು, ಗೇರುಬೀಜದ ವ್ಯಾಪಾರಗಳು ಹೊಗೆಸೊಪ್ಪಿನೊಂದಿಗೆ ಸೇರಿಕೊಂಡಿವೆ. ಹಗಲು ವ್ಯಾಪಾರಿಗಳನ್ನು ಕಾಣುವುದು ದುರ್ಲಭವಾದರೂ, ಸಂಜೆ ಆರಕ್ಕೆ ಅಂಗಡಿ ಬಾಗಿಲು

ತೆರೆನರೆ, ಬೆಳಗಿನ ತನಕ ಚಿಮಿಣಿ ದೀಪ ಈಗಲೋ ಇನ್ನು ಒಂದು ಗಳಿಗೆಗೊ ಎಂಬ ಮಾದರಿಯಲ್ಲಿ ಉರಿಯುತ್ತಿರುತ್ತದೆ.

ಮೊನ್ನೆಯ ಕಾಂಗ್ರೆಸು ಸಭೆಗೆ ಬಂದವರಲ್ಲಿ ಬ್ಯಾರಿಗಳೂ ಒಬ್ಬರಾಗಿದ್ದರು. ಯಕ್ಷಗಾನದಲ್ಲೂ ಅವರಿಗೆ ಅಭಿರುಚಿ ಉಂಟಾಗಿದೆ. ಸಾಮಾನ್ಯವಾಗಿ, ಅರ್ಥದಾರರು ಕಡಿಮೆಯಾದರೆ, ಬ್ಯಾರಿಗಳು ಒಂದು ಅರ್ಥ ಹಾರಿಸಿದರೂ ಹಾರಿಸಿದರೇ. ಜನ್ನ ಪೈಗಳಿಗೆ ಆ ದಿವಸ ನಡೆದ ಗದ್ದಲ ನೋಡಿ–'ಮುಡೂರ, ಚನ್ನ ಮಯ್ಯರು ಎಂದು ಗದ್ದಲ ಹಾಕುವುದರ ಬದಲು, ಡಾಕ್ಟ್ರ. ಶೇಕತಾಲಿಯ ಹಾಗೆ ನಮ್ಮ ಮೂಸೆ ಬ್ಯಾರಿಗಳಿದ್ದಾರೆ. ಯಾಕೆ ಅವರನ್ನು ಕಾಂಗ್ರೆಸು ಅಧ್ಯಕ್ಷರನ್ನಾಗಿ ಮಾಡಬಾರದು? ಮೂಸೆ ಬ್ಯಾರಿಗಳು ಯಾರಿಗೂ ಬೇಡದವರಲ್ಲ. ಎಲ್ಲರಿಗೂ ಸಮನಾಗಿರುವ ಜನ ಅವರು" ಎಂಬ ಸೂಚನೆ ಮಾಡಿದರು. ಡಾಕ್ಟರರ ತಲೆಯಲ್ಲಿ "ಈ ವರ್ಷದ ಮಟ್ಟಿಗೆ ಚನ್ನ ಮಯ್ಯರಿಗೆ ಸಲಾಂ ಹಾಕಿ, ಅವರ ಹೆಸರನ್ನು ಹಿಂದಕ್ಕೆ ತೆಗೆಯಿಸಿದರೆ, ನರಸಿಂಹಯ್ಯ ಆಗ ಮುಡೂರನನ್ನು ಹಿಂದೆಗೆಯಿಸಿಯಾನು. ಜನ್ನ ಪೈಗಳು ಹೇಳಿದ ಹಾಗೆಯೇ ಮೂಸೆ ಬ್ಯಾರಿಗಳನ್ನು ಅಧ್ಯಕ್ಷರನ್ನಾಗಿ ಮಾಡಬಹುದು. ಇನ್ನು ತಮ್ಮ ಅಂಕೆಯಲ್ಲಿರುವ ಯಾರನ್ನಾದರೂ ಕಾರ್ಯದರ್ಶಿಯನ್ನಾಗಿ ಮಾಡಿ ಒಂದು ವರ್ಷ ಕಾಲ ತಳ್ಳಬಹುದು. ಅಷ್ಟರೊಳಗೆ ಒಮ್ಮೆಗಾದ ಜಗಳ ತಣಿದೀತು. ಮುಂದಿನ ವರ್ಷ ನೋಡುವ" ಎಂಬ ಯೋಚನೆಯು ಬಂದಿತು. ಅವರು ಈ ವಿಷಯವನ್ನು ಚನ್ನ ಮಯ್ಯರ ಹತ್ತಿರವೂ. ನರಸಿಂಹಯ್ಯನ ಹತ್ತಿರವೂ ಮಾತನಾಡಿದರು.

ಈ ಸಂಗತಿ ಮೂಸೆ ಬ್ಯಾರಿಗಳಿಗೂ ತಿಳಿಯಿತು. ಕಾಂಗ್ರೆಸು ಪಟ್ಟ ತನಗೆ ಬರುತ್ತದೆ ಎಂಬ ವಿಷಯದಲ್ಲಿ ಅವರೂ ಹಿಗ್ಗಿಯೇ ಕುಳಿತರು. ಇಷ್ಟೆಲ್ಲವೂ ರೂರಲ್ ಆಸ್ಪತ್ರೆ ರಾಮರಾಯರು ಪಂಚಾಯತಿ ಮಾಡಿದ್ದು; ಒಳಗಿಂದೊಳಗೇ ನಾಗಯ್ಯ ಸೆಟ್ಟರಿಗೆ ತಿಳಿಯದೆ ನಡೆದ ಕೆಲಸಗಳಿವು. ನಾಗಯ್ಯನ ಮನಸ್ಸಿನಲ್ಲಿ ಮೊದಲೇ ತಾನು ಕಾಂಗ್ರೇಸು ಪಾರ್ಟಿ ಸೇರಿಕೊಂಡು, ಮುಂದಿನ ಇಲೆಕ್ಷನಿಗೆ. ಬೋರ್ಡಿಗೆ ನಿಲ್ಲಬೇಕು ಎಂಬ ಆಸೆಯಿದ್ದಿತ್ತು. ಅದಾಗದಿದ್ದರೂ ಕಾಂಗ್ರೆಸು ಪ್ರಸಿಡೆಂಟನಾದರೂ ಆಗಬಹುದಲ್ಲ-ಎಂಬ ಆಸೆಯಿತ್ತು. ಆದರೆ ಡಾಕ್ಟರರ ಅಭಿಪ್ರಾಯ ಹೀಗೆಂದು ನರಸಿಂಹಯ್ಯ ತಿಳಿಸಿದಾಗ, ನಾಗಯ್ಯ ಸೆಟ್ಟರಿಗೆ ಗಡಿಬಿಡಿಯಾಯಿತು. ಅವರು, ಇವರು, ಎಂದು ತನಗೆ ಪಟ್ಟ ಸಿಗದೆ

ಇರುವ ಸಂಭವವಾದರೆ ಅವಮಾನವೆಂಬ ಗ್ರಹಿಕೆ ಬಂದಿತು. ಒಂದೇ ಸಮಯ ದಲ್ಲಿ—ಅವರ ಮುಂದೆ ಎರಡೆರಡು ಪ್ರಶ್ನೆಗಳು ನಿಂತುವು: 'ಮುಡೂರನನ್ನು ರಿಮಾಂಡಿನಿಂದ ಬಿಡಿಸುತ್ತೇನೆಂಬ ಪ್ರತಿಜ್ಞೆ' ಒಂದು; ಇತ್ತ ತನ್ನನ್ನು ಬಿಟ್ಟು ಕಾಂಗ್ರೆಸು ಕಮಿಟಿ ಆಗುವುದು ಹೇಗೆ ನೋಡುವ ಎಂಬ-ಹಟ ಇನ್ನೊಂದು.

ನರಸಿಂಹಯ್ಯನ ಮನಸ್ಸೂ ಇತ್ತಂಡ! ಮುಡೂರನ ಬಿಡುಗಡೆಯಾಗ ಬೇಕು. ತನ್ನ ತಮ್ಮನ ಶಾಲೆಗೆ ಬೆಂಬಲವಾಗುವ, ಯಾರಾದರೂ ಕಾಂಗ್ರೆಸಿನ ಅಧ್ಯಕ್ಷರಾಗಬೇಕೆಂದು. ಈ ಲೆಕ್ಕದಲ್ಲಿ ಮೂಸೆಬ್ಯಾರಿಗಳನ್ನು ಎತ್ತಿ ಕಟ್ಟಿಸಿ ಕೆಲಸ ಮಾಡಬಹುದು ಎಂಬುದು ಅವನ ತಿಳಿವಾಗಿತ್ತು. ಆದರೆ ನಾಗಯ್ಯ ನಿಗೇನೆ ಆ ಹಂಬಲವಿತ್ತೆಂದಮೇಲೆ, ನಾಗಯ್ಯ ಸೆಟ್ಟರ ಪಕ್ಷವನ್ನು ಹಿಡಿಯ ದಿರಲು ಮಾರ್ಗವಿಲ್ಲ; ಡಾಕ್ಟರರ ಮನುಸ್ಸು ಹೇಗೆಂದು ಮೂಸೆ ಬ್ಯಾರಿಗಳಿಗೆ ತಿಳಿಯ ಹೇಳಿದವನು ನರಸಿಂಹಯ್ಯ. ಈ ಮೂಸೆ ಬ್ಯಾರಿಗಳು 'ಏನಾಯಿತು. ಏನಾಯಿತು' ಎಂದು ಕೇಳುವಾಗ "ಯಾವುದಕ್ಕೂ ನೋಡಿ, ಮುಡೂರನ ಕೇಸು ಪಡ್ಚಾಗದೆ ನನಗೆ ಬುದ್ಧಿಯೇ ಹರಿಯುವುದಲ್ಲ" ಎನ್ನಬೇಕಾಯಿತು. ಮೂಸೆ ಬ್ಯಾರಿಗಳು ಜನ್ನ ಪೈಗಳಲ್ಲಿಗೆ ವ್ಯಾಪಾರಕ್ಕೆ ಹೋದಾಗ, ನಾಗಯ್ಯ ಸೆಟ್ಟರು ಅಧ್ಯಕ್ಷತೆಗೆ ಉಮೇದುವಾರರಾಗಿದ್ದಾರೆ ಎಂಬುದು ತಿಳಿಯಿತು.

ಮೂಸೆ ಬ್ಯಾರಿಗಳು ವ್ಯಾಪಾರದಲ್ಲಿ ಬಹಳ ತಾಳ್ಮೆವಂತಿಗರು. ಒಂದು ಸೇರು ಹೊಗೆಸೊಪ್ಪಿಗೆ ೮॥ ಅಣೆ ಬೆಲೆ ಹೇಳಿ, ಅರ್ಧ ಘಂಟೆ ಬೇಸರವಿಲ್ಲದೆ ಚೌಕಶಿ ಮಾಡಿ, ಪೈ ಪೈಯಂತೆ ಕಡಿಮೆಮಾಡುತ್ತ, ಮೂರೂಮುಕ್ಕಾಲು ಆಣೆಗೆ ಮಾರುವಷ್ಟು ತಾಳ್ಮೆಯಿದೆ. ಆದರೆ ಯಾವ ಕೆಟ್ಟ ಗಳಿಗೆಯೋ ಏನೋ, ಅಲ್ಲವೆ ಬೇರೇನಾದರೂ ಒಳಗುಟ್ಟಿರಬೇಕೋ ತಿಳಿಯದು-ಒಮ್ಮೆಗೇ ತಾಳ್ಮೆ ತಪ್ಪಿ "ನಾಗಯ್ಯ ಸೆಟ್ಟರು ತಮ್ಮ ಆಸ್ತಿ ಮನೆ ವಹಿವಾಟು ನೋಡುತ್ತ ಬಿದ್ದಿರ ಬಾರದೇ? ಮೈತುಂಬ ಸಾಲಮಾಡಿಕೊಂಡು ತಿರುಗುವವರಿಗೆ ಈ ಡಬ್ಬು ಯಾಕೆ!" ಎಂದರು. ಹಾಗೆಂದಾಗ ಅಲ್ಲಿ ಯಾರೂ ಇದ್ದಿರಲಿಲ್ಲ. ಸಾಹುಕಾ ರರೂ ಮೂಸೆ ಬ್ಯಾರಿಗಳೂ ಮಾತ್ರ. ಆದರೆ ಮರುದಿವಸ ಸಂಜೆಯೊಳಗೆ ನಾಗಯ್ಯ ಸೆಟ್ಟರಿಗೆ ಆ ಸುದ್ದಿ ಮುಟ್ಟದೆ ಇರಲಿಲ್ಲ.

ಅಂದರೆ ಸಂಗತಿ ಹೀಗೆ-ಜನ್ನ ಪೈಗಳ ಸ್ವರ, ಶೀರ ಕಡಿಮೆಗೆ ಇಳಿದರೆ ೧೦೦ಗಜ ದೂರದವರೆಗೆ ಕೇಳಿಸಬಹುದು. ಆದಿವಸ ಅಷ್ಟು ವಠಾರದಲ್ಲಿಯೂ ಯಾರೂ ಇರಲಿಲ್ಲ. ಕಾರಣ ಮೂಸೆ, ಜನ್ನ ಪೈಗಳ ಮುಲಾಖತ್ತು ಆಗುವುದೇ

ರಾತ್ರಿಯ ಊಟ ಮುಗಿದ ಮೇಲೆ. ೧೦ ಘಂಟೆಗೆ ಜನ್ನ ಪೈಗಳಲ್ಲಿಗೆ ಸಾಹುಕಾರರು ಹೋದರೆ, ಇಬ್ಬರೂ ಕೂಡಿ ರಾತ್ರಿ ೧೨ರ ವರೆಗೆ ಕುಳಿತು ಹರಟುತ್ತಿದ್ದು, ಆ ಮೇಲೆ ಊಟಕ್ಕೆ ಹೋಗುತ್ತಾರೆ. ಊರ ಮೇಲಿನ ಪಟ್ಟಾಂಗವೆಂದರೆ ಕಾವೇರಮ್ಮನ ಕಿವಿ ನೆಟ್ಟಗೆ. ಈ ಕಾಂಗ್ರೆಸಿನ ಬುಡ ಬೇರೆಲ್ಲ ಅವರಿಗೆ ಕೇಳಿಯೇ ಗೊತ್ತು. ಹಾಗಾಗಿ ಮರುದಿವಸ ರುಕ್ಕು ಹೆಂಗಸು ಬತ್ತ ಕುಟ್ಟಲಿಕ್ಕೆ ಬಂದಾಗ, ಪಾತನಾಡುತ್ತಿರುವಾಗ-ಮುಡೂರನನ್ನು ಹಿಡಿದ ವಿಷಯ, ನಾಗಯ್ಯ ಸೆಟ್ಟರು ಬಿಡಿಸಿತರುತ್ತೇನೆಂದು ವಿಷಯ, ಆಗದೆ ಸುಮ್ಮನಿದ್ದುದು, ಬ್ಯಾರಿಗಳು ಅವರನ್ನು ಹಿಂದಿನ ರಾತ್ರೆ ಬೈದದ್ದು-ಎಲ್ಲವನ್ನೂ ಕುರಿತು ತಿಳಿಸಿದಳು. ಹೇಳಿಯಾಯಿತು, ಹೇಳಿದ್ದೇನೆಂಬುದನ್ನು ಅವಳು ಮರೆತೂ ಆಯಿತು.

ರುಕ್ಕು ತನ್ನ ಕೆಲಸ ಮುಗಿಸಿಕೊಂಡು ಮನೆಗೆ ಹೋದವಳು ಗಂಡನಿಗೆ ಈ ಸಂಗತಿಯನ್ನು ಸುಮ್ಮನೆ ಹೇಳಿದಳು. ಅಣ್ಣುವಿಗೆ ಬಚ್ಚ ಸಿಕ್ಕಿದ. ಬಚ್ಚನ ಮೂಲಕ ಈ ವರ್ತಮಾನ ತಂತಿಯ ಹಾಗೆ ಮೂರು ಮೈಲು ಸಂಚರಿಸಿ, ನಾಗಯ್ಯ ಸೆಟ್ಟರಿಗೆ ನಿದ್ರೆ ಮಾಡುವ ಹೊತ್ತಿಗೆ ತಲಪಿತು.

ಸರಿ, ನಾಗಯ್ಯ ಸೆಟ್ಟರಿಗೆ ಮೊದಲಿಂದಲೂ ಮೂಸೆಬ್ಯಾರಿಗಳ ಮೇಲೆ ಸಿಟ್ಟಿತ್ತು ಎಂದು ಅವರ ಮಾತಿನಿಂದ ತಿಳಿಯುತ್ತದೆ. “ಹೋ.....ಈ ಬ್ಯಾರಿ ನನಗೆ ಅಡ್ಡ ಕಾಲಿಡುತ್ತಾನೆಯೋ....ಹಾಗಾದರೆ ಕಲಿಸುತ್ತೇನೆ” ಎಂದು ರಾತಾರಾತ್ರೆ ಹೊರಟು, ಸೀತ್ರೈತಾಳರ ಮನೆಗೆ ಹೋಗಿ ಬಾಗಿಲನ್ನು ಬಡಿದರು. ರಾತ್ರಿ ಬಹಳ ಹೊತ್ತಿನ ತನಕವೂ ಸೀತ್ರೈತಾಳರೂ, ನಾಗಯ್ಯ ಸೆಟ್ಟರೂ ಗುಜುಗುಜು ಮಾತಾಡಿಕೊಂಡಿದ್ದರು. ಅವರ ತೈನಾತಿ ಬಚ್ಚನಿಗೂ ಸಹ 'ನೀನು ಚಾವಡಿಯಲ್ಲೇ ಮಲಗಿಕೊಂಡಿರು' ಎಂಬ ಹುಕುಮೂ ಆಗಿತ್ತು. ತನ್ನನ್ನು ಬಿಟ್ಟು ಪಂಚಾತಿಯೇನಪ್ಪ. ಎಂದು ಬಚ್ಚನಿಗೆ ಆಶ್ಚರ್ಯ.

ಅವರ ಪಂಚಾಯತಿ ಮುಗಿಯುವಾಗ ಬೆಳಗಿನ ಜಾವ ಸರಿದಿತ್ತು. ಅಲ್ಲಿಂದ ನಾಗಯ್ಯ ಸೆಟ್ಟರು ಹೊರಟುಹೋದರು. ಎಲ್ಲಿಗೆ? ಏನು?—ಎಂಬ ವಿಷಯ ಸೀತ್ರೈತಾಳರನ್ನು ಬಿಟ್ಟು ಇನ್ನಾರಿಗೂ ಗೊತ್ತಿಲ್ಲ.

ಕಂಬಳಿ ವ್ಯಾಪಾರಿಯನ್ನು ಕೊಂದು ಇಂದಿಗೆ ನಾಲ್ಕುದಿವಸ ಕಳೆದಿತ್ತು. “ನಾಗಯ್ಯ ಸೆಟ್ಟರಿಂದ ಮುಡೂರನನ್ನು ಬಿಡಿಸಲಿಕ್ಕಾಯಿತೆ?” ಎಂಬ ವಿಷಯದಲ್ಲಿ ಜನ್ನ ಮಯ್ಯರೂ ಬಡಾಯಿ ಹಾರಿಸುತ್ತಿದ್ದರು. ಆದೇ ವಿಷಯವಾಗಿ ಈ ದಿವಸ ಜನ್ನ ಪೈಗಳ ಬಂಡಸಾಲೆಯ ಎದುರು ಕುಳಿತು, ಟಿಪಿನಿಯಾಗುವಾಗ

ಕೊಟ್ಟಿದ್ದೇನೆ? ಅಲ್ಲ, ನನ್ನಲ್ಲಿ ಕೊಡಲಿಕ್ಕೇನುಂಟು? ಮೊನ್ನೆ ನನ್ನ ಮಗಳು ಕಾಯಿಲೆ ಎಂದು ಮಲಗಿದಳು; ಬಚಾವಿಲ್ಲ ಎಂದು ಗ್ರಹಿಸಿದ್ದೆ. ಆ ಮದ್ದು, ಈ ಬೇರು, ಎಂದು ಹಾಡಿಯನ್ನೆಲ್ಲಾ ಹರಡಿ, ನಿಸ್ಸಂತಾನ ಮಾಡಿದರೂ ಮಗುವಿಗೆ ಹಿಡಿದ ಜ್ವರ ಬಿಡಲಿಲ್ಲ. ಕೊನೆಗೆ ರಾಮರಾಯರಲ್ಲಿ ಹೋಗಿ ಡಮ್ಮಯ್ಯ ಹಾಕಿದೆ. 'ನನ್ನಲ್ಲಿ ಕಾಸಿಲ್ಲ–ಮಗುವನ್ನೊಂದು ಉಳಿಸಿದ ಪುಣ್ಯ ಬರುತ್ತದೆ'ಅಂದೆ. ಅರ್ಧಊಟದಲ್ಲೇ ಬಿಟ್ಟು,ನನ್ನ ಮನೆಯವರೆಗೂ ಬಂದು, ಇಂಜೆಕ್ಶನ್ ಕೊಟ್ಟು ಹೋದರು. ಮಗವೂ ಹುಷಾರಾಯಿತು. ಅವರಾಗಿ ಒಂದು ಕಾಸು ಕೇಳಲಿಲ್ಲ. ನಾನೇ ಅವರ ಋಣ ಉಳಿಸಬಾರದು ಎಂದು ಎರಡು ಕೋಲುದ್ದದ ಮರಸಣಿಗೆಯನ್ನು ಆವರ ಮನೆಗೆ ಮುಟ್ಟಿಸಿ, "ಅಯ್ಯಾ ಇದೇ ಬಡವನಿಂದಾಗುವುದು; ಏನಾದರೂ ಬಿಟ್ಟಿಬೇಗಾರಿದ್ದರೆ ಪಟಾಳಿ ಪರಮಯ್ಯನಿದ್ದಾನೆ ಎಂದೆ........"

ಸುಬ್ಬನಿಗೂ ತಡೆಯಲಿಲ್ಲ. "ನೀನು ಪರಮಯ್ಯ,ಅಮಟೆಕಾಯಿಯನ್ನು ಅಮರಾವತಿ ಮಾಡುವವ. ಅವರು ನಿನಗೆ ಉಪಕಾರ ಮಾಡಿದರಾಯಿತೇ? ಚನ್ನಪ್ಪಯ್ಯ ಅವರಿಗೆ ಅಷ್ಟು ಹಣ ಸುರುವಿದರಲ್ಲ. ನಾನು ಅವರ ಎಡಗೈ. ಏನೋ ಮೈ ಒಣಗುತ್ತ ಬಂದಿದೆ-ಒಂದು ಇಂಜಕ್ಷನ್ ಕೊಡಿ-ಎಂದೆ. ನಗುತ್ತ ಕಾಲಹರಣ ಮಾಡಿದರೇ ವಿನಾ ಮಾತನಾಡಲಿಲ್ಲ. ಕಡೆಗೆ ನಾನೇ ಇಂಜಕ್ಷನ್ ಸಳಿಗೆ ತಂದು, ಅವರ ಮನೆಗೆ ಹೋಗಿ, ಇನ್ನಾದರೂ ಅಷ್ಟು ಮದ್ದು ಚುಚ್ಚಿ ಅಂದೆ. 'ಆಸ್ಪತ್ರೆಗೆ ಬಾ. ಅದೆಲ್ಲ ಮನೆಯಲ್ಲಿಲ್ಲ' ಎಂದರು. ಅಬ್ಬ, ನಮ್ಮ ಹಳ್ಳಿಯಲ್ಲೂ ಆಸ್ಪತ್ರೆ, ಮನೆ-ಎಂದು ಡೌಲು ಮಾಡುತ್ತಾರಲ್ಲ. ನೋಡುವ ಒಂದು ದಿನ ಸಿಕ್ಕಿಯಾರು ನನ್ನ ಕೈಗೆ."

"ಹಾಗೆಲ್ಲ ಮಾಡಬೇಡ; ಏನು ಸಂಗತಿಯೆಂದು ನಾನು ರಾಮರಾಯ ರನ್ನು ಕೇಳಿ ಹೇಳುತ್ತೇನೆ. ಅವರು ಅಂಥಾ ಜನವೇ ಅಲ್ಲ" ಹೀಗೆಂದು ಮಾತು ಮುಗಿಸಿ ಪರಮಯ್ಯ ಹೊರಟ. ಸುಬ್ಬಭಟ್ಟರ ಸವಾರಿ ಉಡುಪಿಗೆ ಹೋಗಿ ಬರುತ್ತೇನೆ ಎಂದು ಹೊರಟಿತು. ಅದೇ ದಿವಸ ಸಂಜೆಯಲ್ಲಿ ಪರಮಯ್ಯನ ಸವಾರಿ ಕಿವಿಯನ್ನು ತುರಿಸುತ್ತ ಡಾಕ್ಟರರ ಮನೆಗೆ ಹೋಯಿತು.

"ಏನು ಬಂದೆ ಪರಮ?" ಎಂದು ಡಾಕ್ಟರರು ಕೇಳಿದರು. ಪರಮಯ್ಯ ಕೂಲಂಕುಷವಾಗಿ ಸಂಗತಿ ಹೇಳಿ "ನನಗೆ ತಿಳಿಯದೆ ಕೇಳುತ್ತೇನೆ ಡಾಕ್ಟರರೇ, ಆ ಸುಬ್ಬಣ್ಣನಿಗೆ ನಾಲಿಗೆ ದೊಡ್ಡದು. ಆದರೆ ಅವನಲ್ಲಿ ಮತ್ತೇನೂ ದೋಷ

ವಿಲ್ಲ. ಬಡವವಎಂಬುದು ನಿಜ. ಪಾಪ, ಹೋಗಲಿ.ಒಂದು ಇಂಜೆಕ್ಶನ್ ಕೊಟ್ಟು ಬಿಡಿ ನಿಮಗೇನು? ಅವನೇ ಮದ್ದನ್ನು ತರುತ್ತಾನಲ್ಲ. ಸಾಯಲಿ. ಅಂದರೆ ನೋಡಿ–ಚನ್ನಮಯ್ಯರಿಗೆ ಅವನು ಬೇಕಾದವನು. ಉಪಕಾರವಾಗದಿದ್ದರೂ ಅವನಿಂದ ಉಪದ್ರ ಆಗಲಿಕ್ಕೆ ಅಡ್ಡಿಯಿಲ್ಲ....ನಮ್ಮೂರು ನೋಡಿ,ಡಾಕ್ಟರರೇ, ಎಲ್ಲರೂ ತೆಗೆದಿಟ್ಟವರು!" ಎಂದು ದೀರ್ಘ ಭಾಷಣವನ್ನು ಮಾಡಿದ.

ಡಾಕ್ಟರರು ನಗುತ್ತ ತಾಳ್ಮೆಯಿಂದ "ಪರಮಯ್ಯ, ನೀನು ಬೆಳ್ಳಗಿದ್ದುದೆಲ್ಲ ಹಾಲೆನ್ನುವ ಜಾತಿ. ಸುಬ್ಬಣ್ಣನಿಗೆ ಹೆದರಿ ನಾನು ಊರು ಬಿಡಬೇಕೆ? ಅವನಂಥವರಿಗೆ ಸಹಾಯ ಮಾಡಿ ಏನೂ ಲಾಭವಿಲ್ಲ. ಅವ ಬಡವ ನಿಜ.ಆದರೆ ಚನ್ನಮಯ್ಯರನ್ನು ಹಾಳುಗೆಡಿಸಿ ಕುಣಿಸುವವರು ಯಾರು? ಅವನು ನಿಜವಾಗಿಯೂ–ತನಗೆ ಇಂಥದೇ ಕಾಯಿಲೆ ಎಂದು ಹೇಳಿದರೆ–ಒಂದು ಲೆಕ್ಕ. ಮೈ ಒಣಗುತ್ತದೆ ಎಂದು ಹೇಳಿ, ಫರಂಗಿ ರೋಗದ ಮದ್ದನ್ನು ನನಗೆ ತಂದು ತೋರಿಸುತ್ತಾನೆ. ಪರಮ, ರೋಗ ತಕ್ಕೊಳ್ಳುವುದಕ್ಕೆ ಇವನಿಗೆ ಕಾಸುಂಟು. ಮದ್ದಿಗೆ ಕಾಸಿಲ್ಲವೇನು? ಹೆಣ್ಣುಗಳ ಹಿಂದೆ ಸುತ್ತಾಡುವ ಈ ಮಕ್ಕಳಿಗೆ, ಕೋದರೂ ನಾನು ಧರ್ಮ ಮಾಡುವವನಲ್ಲ. ಆಸ್ಪತ್ರೆಗೆ ಬಂದರೆ, ಲೆಕ್ಕಾಚಾರದ ಮದ್ದನ್ನು ಕೊಟ್ಟು ಕಳಿತೇನು" ಎಂದರು.

ಪರಮಯ್ಯನಿಗೆ ಸುಬ್ಬಣ್ಣ ಭಟ್ಟನ ಕಾಯಿಲೆಯ ಸುದ್ದಿಯ ಚೂರು ಸಿಕ್ಕಿದ್ದೆಂಬುದು ಒಂದು ಲಾಭವಾಯಿತು. "ನಿಮ್ಮ ಪೈಂಟು ಬರಾಬರಿ, ತಿಂದು ಸೊಕ್ಕಿ ತಂದುಕೊಂಡ ಜಡಕ್ಕೆ ನೀವು ದಂಡ ತೆರುವುದೆಂದರೆ ಅರ್ಥವಿಲ್ಲ" ಎಂದು ಆವನೂ ಹೇಳಿದ.

ರಾಮರಾಯರು ನಮ್ಮ ಹಳ್ಳಿಯ ಜೀವನದಲ್ಲಿ ಸಿಲುಕಿ ಮೂರು ವರ್ಷವಾಯಿತು. ಎರ್ಮಾಳದಿಂದ ಬಂದ ಶಿವಳ್ಳಿ ಬ್ರಾಹ್ಮಣರು ಅವರು. ಕಾಲೇಜಿನಲ್ಲಿ ಓದುತ್ತಿದ್ದಾಗ ಅವರಿಗೆ ದೇಶೋದ್ಧಾರದ ಹುಚ್ಚು ಅಷ್ಟಿಷ್ಟಲ್ಲ. ಅದಕ್ಕೇನೆ ಶಾಲೆ ಬಿಟ್ಟು ಜೈಲಿಗೆ ಹೋಗುವ ಯೋಚನೆ ಮಾಡಿದ್ದರು. ಅದು ತಿಳಿದ ತಕ್ಷಣ, ಅವರ ಅಪ್ಪ ಹಯವದನ ಯಂಬರ್ಜಡತ್ತಾಯರು ಮಗನಲ್ಲಿ ಓಡಿಬಂದು–"ಮಗನೆ, ನಿನಗಾಗಿ ಆಸ್ತಿಮಾರಿ ಇಂಗ್ಲಿಷು ಪಾಠ ಮಾಡಿಸಿದರೆ– ನೀನು ಯಾವುದೊಂದು ಸಾರ್ಥಕಕ್ಕೆ ಬಾರದ ಕೆಲಸ ಮಾಡುತ್ತಿಯೇನು?" ಎಂದು ಅತ್ತರು. ರಾಮಣ್ಣನ ಸವಾರಿ ದೇಶದ ದಾರಿದ್ರ್ಯದ ಮೇಲೆ ಒಂದು ಉಪನ್ಯಾಸವನ್ನು ಮಾಡಿತು. ಅದಕ್ಕೆ ತಂದೆ "ಮಗು, ಊರು ಉದ್ಧಾರ

ಮಾಡುವವನು ಪರಮಾತ್ಮ, ಮನುಷ್ಯನಿಂದೇನು ಆದೀತು? ನಿನಗೆ ಅಷ್ಟು ವನಸ್ಸಿದ್ದರೆ, ಮುಂದೆ ವಕೀಲನಾಗಿ ಕೆಲಸ ನೋಡಿ, ಸಂಪಾದನೆ ಮಾಡಿ, ನಿನ್ನ ಜೀವನ ನಡೆಸಿ, ಹಣ ಉಳಿದರೆ, ಬೇಕಾದವರಿಗೆ ಉಪಕಾರ ಮಾಡು. ತನ್ನನ್ನು ಕೆಡಿಸಿಕೊಂಡು ಊರಿಗೆ ಉಪಕಾರವೇ?" ಎಂದು ಯುಕ್ತಿಯಿಂದ ಮಾತನಾಡಿದರು. ಮೇಲೆ ಕಣ್ಣೀರನ್ನೂ ಸುರಿಸಿದರು.

ರಾಮರಾಯರಿಗೆ ಆಗ ಚಿಕ್ಕ ವಯಸ್ಸು; ಮೃದು ಮನಸ್ಸು ಧಾರಾಳ ವಾಗಿತ್ತು. ಆದುದರಿಂದಲೇ, ನನ್ಮೂಲಕ ತನ್ನಲ್ಲಿ ಮನೆಮಾಡಿದ ಆವೇಶವನ್ನು ತಡೆದುಕೊಂಡರು. ಇಂಟರ್ ಪರೀಕ್ಷೆಯಾಯಿತು. ಮುಂದೆ ವಕಾಲತ್ತೋ ಡಾಕ್ಟರಿಕೆಯೋ ಎಂದು ತೂಗಿ, ತೂಗಿ ನೋಡಿ, ಬಳಿಕ, ತಂದೆ ಯಂಬ್ರುಡ ತ್ತಾಯರಿಗೆ ಏನೇನೂ ಸಮಾಧಾನವಿಲ್ಲದ, ಹೆಣಸಿಗಿಯುವ ಡಾಕ್ಟರಿಕೆಯನ್ನು ಕಲಿಯಲು ಯೋಚನೆ ಮಾಡಿದನು. ಮಾಡಿದ ಮೇಲೆ ಮದ್ರಾಸು ವನವಾಸ ಮುಗಿಸಿ ಊರಿಗೆ ಬಂದರು. 'ಇನ್ನು ಮುಂದೆ ಏನು?' ಎಂಬ ಪ್ರಶ್ನೆ ಬಂದಿತು. ಅತ್ತಲಾಗಿ ಜಾತಕಗಳ ರಾಶಿಗಳೂ ಬಂದು ಸುರಿದುವು. ಯಥಾಪತ್ತಾಗಿ ಒಂದು ಮದುವೆ ಎನ್ನುವುದನ್ನು ಮಾಡಿಕೊಂಡು–ಬೋರ್ಡಿನ ಆಶ್ರಯದಲ್ಲಿ ರೂರಲ್ ಆಸ್ಪತ್ರೆಯ ಆಫೀಸರರಾಗಿ ನಮ್ಮ ಊರಿಗೆ ಬಂದರು. ಬರುವಾಗಲೇ ಅವರ ತಂದೆ "ಕೋಟದವರ ಹಿಂಡು ಅಲ್ಲಿ ಜಾಸ್ತಿ....ಏನೂ ಮಾಡಿಯಾರು" ಎಂಬ ಎಚ್ಚರಿಕೆಯನ್ನು ಕೊಟ್ಟಿದ್ದರು. ರಾಮರಾಯರು ಶಿವಳ್ಳಿಯವರು-ಎಂದು ಕೇಳಿ ದೊಡನೆಯೇ "ಹಾ-ಉಡುಪಿಯ ಪಿಳ್ಳೆ ನಮ್ಮೂರಿಗೇನು? ಆಗಲಿ, ಯಾವ್ಯಾವ ಜಾತಿಯವರು ಬರುವುದಕ್ಕಿಂತ ಬ್ರಾಂಬ್ರೇ ಬಂದರಲ್ಲ" ಎಂದು ಸೀತೈತಾಳರ ಹಗಿನವರಿಗೆ ಸಮಾಧಾನವಾಯಿತು.

ರಾಮರಾಯರು ಇನ್ನೂ ಹುಡುಗ ವಯಸ್ಸಿನವರು. ಅವರು ನಮ್ಮಲ್ಲಿಗೆ ಬಂದಾಗ ಇದ್ದ ಉಮೇದನ್ನು ಹೇಳತೀರದು. ತಮ್ಮ ಡಾಕ್ಟರಿ ವೃತ್ತಿಯೆಂದರೆ ನೂರಾರು ನರಳುವ ಜೀವಿಗಳನ್ನು ಉಳಿಸುವ ಸಂದರ್ಭ ಎಂದು ತಿಳಿದಿದ್ದರು. ಆಸ್ಪತ್ರೆ ಧರ್ಮದ್ದು; ಮದ್ದು ಕೊಡುವವರು ಬ್ರಾಹ್ಮಣರು–ಎಂದು ಕೇಳಿ, ಕಾಯಿಲೆ ಇದ್ದವರೂ, ಇಲ್ಲದವರೂ ಸಾಲು ಸಾಲಾಗಿ ಬರತೊಡಗಿದರು. ಬ್ರಾಹ್ಮಣರ ಹಿಂಡಿಗೆ ಹಿಂಡೇ ಅವರ ಆಸ್ಪತ್ರೆಗೆ ಹೋಗುವುದನ್ನು ನೋಡಿ ನಾಗಯ್ಯ 'ಇದೇನು, ಆಸ್ಪತ್ರೆ ಎಂದರೆ ಭೋಜನ ಶಾಲೆಯೇನು?' ಎಂದು ನಗಡಿದ್ದೂ ಉಂಟು.

ಬಂದ ಒಂದು ವರ್ಷ ಡಾಕ್ಟರರಿಗೆ ಉಸಿರಿಗೇ ಬಿಡುವಿಲ್ಲ. ವಿಸಿಟು. ವಿಸಿಟು, ವಿಸಿಟು! ಪ್ರತಿಫಲವೆಂದರೆ, ಸರಕಾರಿ ಗ್ರಾಂಟು ಮದ್ದಿಗೆ ಸಾಲದು; ಮನೆಯಲ್ಲಿರಲಿಕ್ಕೆ ಫುರಸತ್ತೂ ಸಾಲದು; ಹೆಂಡತಿಗೆ ಗಂಡನ ಭೇಟಿಯಾಗುವುದು ಊಟದ ಕಾಲದಲ್ಲಿ ಮಾತ್ರ. ಇತ್ತ ಊಟಕ್ಕೆ ಹರ ಹರ. ಅಂದರೆ, ಆರು ಏಳು ಕೋರ್ಜಿ ಅಕ್ಕಿಯಿರುವ ಹಳ್ಳಿಯವರೂ ಸಹ ಕೌಪೀನಧಾರಿಗಳಾಗಿ ಬಂದು “ಏನೂ ಗತಿಯಿಲ್ಲ. ಒಂದು ಹೆರಿಗೆ ಮಾಡಿಸಿಕೊಡಬೇಕು” ಎಂದು ಅತ್ತರೆ ಅವರೇನು ಮಾಡುವುದು? ಕ್ರಮೇಣ–ಊರಲ್ಲಿ, ನಿಜವಾಗಿ ಗಂಜಿಗೆ ಗತಿಯಿರುವವರು ಯಾರು? ಇಲ್ಲದವರು ಯಾರು–ಎಂಬುದು ತಿಳಿಯಿತು. ಆದ್ದರಿಂದ ‘ಮನೆಗೆ ಬನ್ನಿ’ ಎಂದು ಕರೆದರೆ, ‘ಫೀಸು’ ಎಂದು ಬಾಯಿ ತೆರೆಯ ತೊಡಗಿದರು. ಆಗ ಬಂತು ಕೇಡು! ‘ಅಬ್ಬಾ, ಡಾಕ್ಟರರಿಗೆ ದುಡ್ಡಿನ ಅಂಕರು ಹಿಡಿದಿದೆ’ ಎಂದು ಪುಕಾರೂ ಹೊರಟಿತು. ಉಪಾಯವಿಲ್ಲದೆ ದುಡ್ಡು ಕೊಟ್ಟ ಮಹಾನುಭಾವರು ‘ಬರೀ ಕಹಿನೀರು ಕೊಟ್ಟದ್ದು ಡಾಕ್ಟರರು. ೧೫ ದಿವಸ ಕುಡಿದು ನೋಡಿಯಾಯಿತು, ಏನಾದರೂ ಫಲವಿದೆಯೇ!’ ಎನ್ನತೊಡಗಿದರು.

ಈಗ ರಾಮರಾಯರು ಊರವರ ವಿಷಯದಲ್ಲಿ ತುಸು ಎಚ್ಚರವಾಗಿದ್ದಾರೆ. ತೀರ ‘ಗೋಕರ್ಣ’ಕ್ಕೆ ಅವರು ಸಿದ್ಧರಾಗಿಯೇ ಇಲ್ಲ, ಏನೋ ಬಡವರೆಂದು ಖಾತ್ರಿಯಾದರೆ, ತಮ್ಮಿಂದಾಗುವ ಸಹಾಯ ಮಾಡುತ್ತಾರೆ. ಅಲ್ಲದೆ, ಅವರ ಮನೆಯ ಖರ್ಚು ವೆಚ್ಚವೂ ಏರಿದೆ. ಸಂಸಾರದಲ್ಲಿ ಒಂದು ಕೂಸು ಹೆಚ್ಚಾಗಿದೆ. ತಂದೆಯವರು ತೀರಿಕೊಂಡುದರಿಂದ, ಎವರ್ಾಳದಿಂದ ತಾಯಿಯನ್ನೂ ಕರೆದು ತಂದಿದ್ದಾರೆ. ಜತೆಗೆ ಒಬ್ಬಿಬ್ಬರು ತಂಗಿಯರಿದ್ದಾರೆ. ಇವರೆಲ್ಲರೂ ಉಣ್ಣುವ ಅಭ್ಯಾಸವನ್ನು ಕಲಿತವರಾದುದರಿಂದ, ಕಾಸಿಲ್ಲದೆ ಸಂಸಾರ ಸಾಗುವಂತಿಲ್ಲ. ಹೀಗಾಗಿ ರಾಮರಾಯರು ಬಾಯಿಬಿಟ್ಟು ‘ಕಾಸು’ ಎಂದು ಜನರನ್ನು ಕೇಳಿ, ದ್ವೇಷ ಕಟ್ಟಿಕೊಳ್ಳುವಂತಾಗಿದೆ.

ಏನು ಮಾಡುವುದು? ನಮ್ಮ ಊರವರೂ ದುಡ್ಡು ಕೊಟ್ಟು ಮದ್ದು ಕೊಳ್ಳುವ ದುಶ್ಚಾಳಿಯನ್ನು ಕಲಿಯುತ್ತಿರುವುದು ಈಗೀಗ. ಕೇಳು ವೈದ್ಯನ ಕಷಾಯದ ಕುಡ್ತೆಗೆ ಆರಾಣೆ ಬೆಲೆಯಾದರೂ ನಷ್ಟವೆಂದು ತಿಳಿಯುವುದಿಲ್ಲ. ಕಾರಣ–ಒಂದು ಕುಡ್ತೆ ಕಷಾಯ ಬಿದ್ದರೆ. ಕನಿಷ್ಟ ನೂರು ಜಡಜಾಪತ್ತುಗಳನ್ನು ಗುಣಮಾಡುವ ಶಕ್ತಿ ಅದಕ್ಕಿದೆ. ಆಸ್ಪತ್ರೆ ನೀರನ್ನು ಕುಡಿದರೆ, ಅದು ಜ್ವರವನ್ನು ನಿವಾರಿಸುವುದೂ ಸಂಶಯ-ಎಂಬುದು ಅವರ ತಿಳಿವು.

ರಾಮರಾಯರನ್ನು ಊರವರ ಕಲಹಗಳಲ್ಲಿ ಎಳೆತರಲು ಪ್ರಯತ್ನಿಸಿದವರು ಬಹಳ. ಅವರು ಬಲು ಜಾಗ್ರತೆಯಿಂದಲೇ ಇದ್ದಾರೆ. ಮೊನ್ನೆ ಅತಿಶಯ ಉತ್ಸಾಹದಿಂದ ಕಾಂಗ್ರೆಸು ಕಮಿಟಿಯನ್ನು ಮಾಡಿ, ಸತ್ಯ, ಅಹಿಂಸಾ ತತ್ವಗಳ ಪ್ರಚಾರಕ್ಕೆ ಅವರು ಪ್ರಯತ್ನಿಸಿದರು. ಅದರ ಫಲ ತಿಳಿಯಿತು. ಅತ್ತ ಜನ್ನಮಯ್ಯನವರು, ಇತ್ತ ಮೂಸೆ ಬ್ಯಾರಿಗಳು, ಮಗದೊಂದು ಕಡೆಯಲ್ಲಿ ನಾಗಯ್ಯ ಸೆಟ್ಟರು–ಎಲ್ಲರಿಗೂ ಬೇಡದವರಾಗಿ ಕುಳಿತರು. ಈಗೀಗ ಅವರಿಗೆ ಅನಿಸ ತೊಡಗಿದೆ: “ಯಾರ ಪಕ್ಷಕ್ಕೂ ನಾನು ಹೋಗಲಿಲ್ಲವೆಂದರೆ ಯಾರಿಗೂ ಬೇಡವಾದೇನು. ಯಾರದ್ದಾದರೂ ಆಶ್ರಯ ಬೇಕೇ ಬೇಕು. ಆದರೆ ಈ ಹಳ್ಳಿಯಲ್ಲಿ ಯಾರನ್ನು ಹಿಡಿಯಲಿ? ಯಾರನ್ನು ಬಿಡಲಿ” ಎಂಬ ತೊಡಕಿನಲ್ಲಿದ್ದಾರೆ. ಸಂಜೆ, ಬೇಸರವಾದರೆ ಯಾರನ್ನೂ ಕರೆದು ಮಾತನಾಡಿಸುವಂತಿಲ್ಲ.

ಹೀಗಾಗಿ ಹೆಂಡತಿಯನ್ನು ಕರೆದುಕೊಂಡು, ಮಗುವನ್ನು ಹೊತ್ತುಕೊಂಡು, ತಮ್ಮಷ್ಟಕ್ಕೇ ವಾಕಿಂಗಿಗೆ ಹೋಗುತ್ತಾರೆ. ಅದೂ ಕಷ್ಟವೇ! “ನಮ್ಮ ‘ರೂಡಾರಿ’ಗೆ ಇದು ಮುಂಬಯಿ ಶಹರು ಎಂದು ತಲೆಯಲ್ಲಿದೆ. ಅಲ್ಲವಾದರೆ ನಮ್ಮ ಹಳ್ಳಿಯಲ್ಲಿ ಇವರ ವಾಕಿಂಗು–ಗೀಕಿಂಗು ಯಾಕೆ ಬೇಕು? ಯಾರು ಇವರ ಡೌಲನ್ನು ನೋಡಿ ‘ಬೇಷ್’ ಎನ್ನುತ್ತಾರಂತೆ” ಎನ್ನತೊಡಗಿದ್ದಾರೆ. ಇನ್ನು ಕೆಲವರು “ಆಸ್ಪತ್ರೆಗೆ ಈಗ ಜನರೇ ಬರುವುದಿಲ್ಲ ಎಂದು ಕಾಣುತ್ತದೆ”- ಎನ್ನುತ್ತಾರೆ.



# ೧೬. ಪ್ರಸ್ತಾವನೆ ಅಥವಾ ಚುನಾವಣೆ

ಉಡುಪಿಯ ವೈಕುಂಠರ ಕಾಂಗ್ರೆಸು ಲೆಕ್ಚರು ನಡೆದು ಆರು ತಿಂಗಳು ಸಂದಾಯಿತು. ನಾಗಯ್ಯ ಸೆಟ್ಟರವರು ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರಾಗಿದ್ದಾರೆ. ನಮ್ಮೂರ ಕಮಿಟಿ ಚುನಾವಣೆ ತುಸು ಮೊದಲು ಆಗಿದ್ದರೆ, ತಾಲೂಕು, ಜಿಲ್ಲಾ ಕಮಿಟಿಗಳ ತನಕ ಏರಿ, ಮೆರೆಯುವ ಸುಯೋಗ ನಾಗಯ್ಯ ಸೆಟ್ಟರಿಗಿತ್ತು. ಆದರೆ ಮುಂದಿನ ವರ್ಷವಾದರೂ ಅವರಿಗೆ ಆ ಆಸೆಯಿದೆ. ಈ ಬಾರಿ ರಾಮರಾಯರ ಉಪದೇಶದಂತೆ ಚನ್ನಪ್ಪ ಮಯ್ಯರು ಸುಮ್ಮನೆ ಕುಳಿತಿದ್ದಾರೆ. ಸದ್ಯಕ್ಕೆ ತಟಸ್ಥರಾಗಿದ್ದಾರೆ "ನೋಡುವ ಮುಂದಿನ ವರ್ಷ: ಆಗಲೂ ಹೀಗೆಯೇ ಆದರೆ, ನಮ್ಮ ಗ್ರಾಮ ಬೇರೆಯೇ ಎಂದು ಹೇಳಿ, ಇನ್ನೊಂದು ಹೊಸ ಕಮಿಟಿಯನ್ನು ಮಾಡಿ, ರಸ್ತೆಯ ಮೂಡು ಗ್ರಾಮ ಬೇರೆ ಪಡುಗ್ರಾಮ ಬೇರೆಯೇ ಮಾಡಿಬಿಡಬೇಕು. ಪಡುಗ್ರಾಮದಲ್ಲಿ ನಾಗಯ್ಯ ಕಾಲಿರಿಸುವ ಹಾಗಿಲ್ಲವಪ್ಪ" ಎಂದು ಸಮಾಧಾನ ತಂದುಕೊಂಡಿದ್ದಾರೆ.

ಇತ್ತ ಮುಡೂರನ ಬಿಡುಗಡೆಯಾಯಿತು. ಸಾಕಷ್ಟು ಹಣ ವ್ಯಯಿಸಿ ಮೂಸೆ ಬ್ಯಾರಿಗಳೂ ರಿಮಾಂಡಿನಿಂದ ಹೊರಕ್ಕೆ ಬಂದರು. ಪೋಲೀಸಿನವರಿಗೆ ಸಾಕಷ್ಟು ಫಾಯಿದೆಯಾಯಿತು ಎಂದು ಜನರು ಆಡಿಕೊಳ್ಳುತ್ತಾರೆ. ಆ ದಿನ ಕಂಬಳಿ ವ್ಯಾಪಾರಿ ಹೇಗೆ ತೀರಿಕೊಂಡನೋ ಯಾರಿಗೂ ತಿಳಿಯದು. ಮೂಸೆ ಬ್ಯಾರಿಗಳ ಮನಸ್ಸಿನಲ್ಲಿ "ನನ್ನನ್ನು ಪಜೀತಿಗೆ ಇಳಿಸಿದ ನಾಗಯ್ಯನನ್ನು ಹಗಲಲ್ಲೆ ಸೀಳುತ್ತೇನೆ" ಎಂಬ ಬದ್ಧ ದ್ವೇಷವೂ ಹುಟ್ಟಿಕೊಂಡಿದೆ. ಆದರೆ ತತ್ಕಾಲಕ್ಕೆ ಯಾವ ವಿಷಯವೂ ಹೆಚ್ಚಾಗಿ ಕಾಣುವುದಿಲ್ಲ. ಅಂತು-ಇಲ್ಲ ಎನ್ನುವ ಹಾಗಿಲ್ಲ. 'ಪುಟ್ಟರಂಗಿಯ ಕೈಯಲ್ಲಿ ಚನ್ನಪ್ಪಯ್ಯ ದಿವಾಳಿಯಾಗಲು ಎಷ್ಟು ದಿವಸ' ಎಂದು ಬಾಯಿ ತೆರೆದವರೂ ಹಲವರಿದ್ದಾರೆ. ಗಂಗೊಳ್ಳಿಯವರು ಅಕ್ಕಣಿಯ ಮಾತು ಕೇಳಿ ೧೦೦೦ ರೂಪಾಯಿ ಕಳೆದುಕೊಂಡರೂ, ಈಗಲೂ ನಮ್ಮೂರಿಗೆ ಆಗಾಗ ಬಂದು ಹೋಗುತ್ತಿದ್ದಾರೆ. ಅವರ ಚಟುವಟಿಕೆ ಬೇರೇನಿಲ್ಲ. ಚನ್ನಮಯ್ಯರ ಬಂಗಲೆಯ ಎದುರಿಗೆ ಒಂದು ತುಂಡು ಜಾಗವನ್ನು ತೆಗೆದುಕೊಂಡು ಬಂದು ಕುಳಿತಿದ್ದಾರೆ. "ಅಲ್ಲಿದ್ದು, ಪುಟ್ಟರಂಗಿಯನ್ನು ಚೆಲುವಿನಲ್ಲಿ ನುಂಗುವ ರತಿಯೊಬ್ಬಳನ್ನು ತಂದು, ಸ್ಥಾಪಿಸಿ, ಮುಖವನ್ನು ಮೇಲೆತ್ತದಹಾಗೆ ಮಾಡಿಸು

ತ್ತೇನೆ" ಎಂಬ ಗಾಢ ತೀರ್ಮಾನ ಮಾಡಿದ್ದಾರೆ. ನಮ್ಮ ಕೆರೆಕಟ್ಟೆ ನರಸಿಂಹನ ಪ್ರಯತ್ನಗಳು ಹಣವಿಲ್ಲದೆ ಮುಂದುವರಿಯುವಂತಿಲ್ಲ. 'ನೀಲು' ಆಸೆಯನ್ನು ಬಿಟ್ಟ ಹಾಗೆಯೇ-ಎಂದು ಮನಸ್ಸು ಹೇಳತೊಡಗಿದೆ; ಅದರ ಬೆನ್ನಿಗೇ ಡಿಸ್ಟ್ರಿಕ್ಟ್ ಬೋರ್ಡುಶಾಲೆ. ಅವನು ತತ್ಕಾಲಕ್ಕೆ ಶರವನ್ನು ಕೆಳಗೆ ಇಳಿಸಿದ ಹಾಗೆಯೇ.

ಇದೇ ಸಮಯದಲ್ಲಿ ನಮ್ಮ ಜಿಲ್ಲಾ ಬೋರ್ಡಿನ ಹೊಸ ಚುನಾವಣೆ ಬಂದಿದೆ. ಇದರ ಗಾಳಿ ಮಂಗಳೂರಿನಲ್ಲಿ ಬಲವಾಗಿ ಬೀಸತೊಡಗಿತು. ದೇ।ಭ। ವೈಕುಂಠನವರು ಇಷ್ಟೊಮ್ಮೆ ನಮ್ಮೂರಿಗೆ ಬಂದರು. ಅವರು ಜನ್ನ ಪೈಗಳಲ್ಲಿ ಕುಳಿತು ಮಾತನಾಡುತ್ತಿರುವುದನ್ನು ನಾಗಯ್ಯ ಸೆಟ್ಟರು ಕಂಡಿದ್ದಾರೆ. "ರಾಯರ ಸವಾರಿ ಯಾವಾಗ ಬಂದಿತು? ಈ ಸಾರಿ ಒಂದು ಲೆಕ್ಚರು ಹೇಳಿದರೆ ಚೆನ್ನಾಗಿತ್ತು" ಎಂದು ಕೇಳಿದರು. "ಬ್ಯಾಡಯ್ಯ-ಒಂದು ಲೆಕ್ಚರ್ ಹೇಳಿಯೇ ಆ ದಿವಸ ನಿಮ್ಮ ಊರಿನಲ್ಲಾದ ಗದ್ದಲವೇ ಸಾಕು. ಕಾಂಗ್ರೆಸು ಸತ್ಯ, ಅಹಿಂಸೆ ಗಳಿಂದ ಸಾಗಬೇಕಾದದ್ದು; ನಿಮ್ಮಲ್ಲಿ ಗುಲ್ಲು ಗದ್ದಲಗಳಿಲ್ಲದೆ ನಡೆಯುವ ವ್ಯಾಪಾರವೇ ಇಲ್ಲ" ಎಂದರು.

ಅವರು ಬಂದವರು ಉಡುಪಿಗೆ ಹೋದರು. ಅವರು ಹೋದ ಮರು ದಿವಸ ಡಾಕ್ಟರರಿಗೆ ಸಂಗತಿ ತಿಳಿಯಿತು. ಅವರು ಚನ್ನ ಮಯ್ಯರನ್ನು ಕರೆದು "ನಿನ್ನೆ ರಾಯರು ಬಂದಿದ್ದರಂತೆ, ಡಿಸ್ಟ್ರಿಕ್ಟ್ ಬೋರ್ಡಿಗೆ ನಾಮಿನೇಶನ್ ಹಾಕಿ ಸಲು-ಎಂದು ಕಾಣುತ್ತದೆ. ಯಾರನ್ನೂ ಕಾಣದೇ ಅವರವರಷ್ಟಕ್ಕೆ ಬಂದು ಹೋದುದನ್ನು ಕಂಡರೆ, ಒಳಗಿನ ಏರ್ಪಾಡು ಏನೋ ಆಗಿದೆ-ಎಂಬುದು ಕಾಣುತ್ತದೆ. ಏನೂ ಇರಲಿ, ನೀವು ಒಂದು ನಾಮಿನೇಶನು ಪೇಪರು ಕಾಂಗ್ರೆ ಸಿಗೆ ಕಳುಹಿಸಿರಿ" ಎಂದು ಸೂಚಿಸಿದರು.

ಎರಡು ದಿವಸಗಳಲ್ಲಿ ಉಡುಪಿಗೆ ಹೋಗಿ ಬಂದ ನಾಗಯ್ಯ ಸೆಟ್ಟರು "ವೈಕುಂಠಯ್ಯ ನಮಗೆ ಟೊಪ್ಪಿ ಹಾಕಲು ಬಂದದ್ದೇ ನಿಜ. ಜನ್ನ ಪೈಗಳಿಂದ ನಾಮಿನೇಶನು ಬರೆಯಿಸಿಕೊಂಡು ಹೋದರಂತೆ" —ಎಂದು ಕೆರೆಕಟ್ಟೆ ನರಸಿಂಹಯ್ಯನನ್ನು ಕಂಡು ಮಾತನಾಡಿಸಿದರು. "ನೀವೂ ಹಾಕಿ" ಎಂಬ ಉಪದೇಶವಾಯಿತು. ನಾಗಯ್ಯ ಜನ್ನ ಪೈಗಳಲ್ಲಿಗೆ ಹೋಗಿ "ಸಾಹುಕಾರರೇ- ಒಳ್ಳೆ ನಂಬಿಕೆಯಿದು. ಕಾಂಗ್ರೇಸು ಅಧ್ಯಕ್ಷ ನಾನು; ನನಗೇನೆ ಸುದ್ದಿ ತಿಳಿಸದೆ ಜಾತಿ, ಜಾತಿ ಒಂದಾಗಿ ನಾಮಿನೇಶನು ಹಾಕಿದಿರಿ. ನಾನೂ ಕಳಿಸಿದ್ದೇನೆ. ನೀವು ನಿಮ್ಮದನ್ನು ಹಿಂದೆಗೆಯಿರಿ....ಇಲ್ಲವಾದರೆ ನಾಗಯ್ಯನ ಸ್ನೇಹ ತಪ್ಪಿತು ಎಂದು

ತಿಳಿಯಿರಿ"ಎಂಗು ನೋಟೀಸು ಕೊಟ್ಟು ಹೋದರು. ಜನ್ನಪೈಗಳಿಗೆ ಮಾರ್ಗ ವಿಲ್ಲ. "ನನ್ನದನ್ನು ಹಿಂದೆಗೆಯಿರಿ" ಎಂದು ಕಾಗದ ಬರೆದರು. ಅದೇ ದಿವಸ ಮುಡೂರ, ಮೂಸೆಬ್ಯಾರಿ, ಚನ್ನ ಮಯ್ಯರು, ನಾಗಯ್ಯ ಸೆಟ್ಟರು—ಇಷ್ಟು ಜನರೂ ಒಂದು ಸೀಟಿಗೆ ನಾಮಿನೇಶನು ಹಾಕಿ ಕುಳಿತರು. ಎರಡು ದಿವಸಗಳ ಬಳಿಕ ನಮ್ಮ ಊರಿಗೆ ದಿವಸಕ್ಕೆ ಮೂವತು ದೇಶಭಕ್ತರುಗಳು ಮಂಗಳೂರು, ಉಡುಪಿ, ಕುಂದಾಪುರಗಳಿಂದ ಬಂದು ಸುರಿಯಲಾರಂಭಿಸಿದರು. ಜನ್ನ ಪೈಗಳಿಗೆ 'ನೀವು ಹಿಂದೆಗೆಯಬಾರದು' ಎಂದು ಹೇಳಲು ಕೆಲವು ದೇಶಭಕ್ತರು, ಗಂಗೊಳ್ಳಿ ಸಾಹುಕಾರರಿಗೆ ಸಹಾಯವನ್ನು ಕೊಡಿ ಎನ್ನಲು ಕೆಲವರು; 'ಇನ್ನು ನಾಗಯ್ಯ ಸೆಟ್ಟರೇ, ಈ ಸಾರಿ ನೀವು ಈ ಇಲೆಕ್ಷನಿನಲ್ಲಿ ತಂಟೆಮಾಡಕೂಡದು' ಎಂದು ಕೇಳಲು ಇಬ್ಬರು-ಹೀಗೆ ದೇಶಸೇವೆಯ ತೆರೆಗಳ ಮೇಲೆ ತೆರೆಗಳು ನಮ್ಮೂರಲ್ಲಿ ಬೀಸತೊಡಗಿದುವು.

ಅಷ್ಟರಲ್ಲಿ ಉಡುಪಿ ವಕೀಲ ಬಲರಾಮರಾಯರು ಕಾಂಗ್ರೆಸು ಪಾರ್ಟಿಗೆ ಸೇರಿ ನಮ್ಮೂರಿನ ಸೀಟಿಗೆ ನಾಮಿನೇಶನು ಕೊಟ್ಟಿದ್ದಾರೆಂಬ ಸುದ್ದಿ ಬಂದಿತು.

ನಾಲ್ಕು ದಿವಸಗಳ ಬಳಿಕ ನಾಗಯ್ಯ ಸೆಟ್ಟರ ಮತ್ತು ಚನ್ನ ಮಯ್ಯರ ನಾಮಿನೇಶನುಗಳು ಸಕಾಲಕ್ಕೆ ಆಫೀಸಿಗೆ ಬರಲಿಲ್ಲವೆಂಬ ಸುದ್ದಿಯಾಯಿತು. ಉಳಿದವರಲ್ಲಿ ಕಾಂಗ್ರೆಸು ಸಿವಿಕ್ ಮಂಡಲದವರು, ಒಬ್ಬರನ್ನು ನಮ್ಮೂರ ಸಲುವಾಗಿ ಆರಿಸುವುದಾಗಿ ತೀರ್ಮಾನಿಸಿದರು. ನಮ್ಮ ಊರವರ ಪೈಕಿ ಉಡುಪಿಯ ಬಲರಾಮರಾಯರೂ, ಗಂಗೊಳ್ಳಿ ಸಾಹುಕಾರರೂ—ಇಬ್ಬರೇ ಉಳಿದರು.

ರಾಮ ನಾಯ್ಕರು ಬಹಳ ಬಾರಿ ನಮ್ಮೂರಿನ ಉಮೇದುವಾರರಲ್ಲಿಗೆ ಬಂದು, ಅವರನ್ನು ಹಿಂದೆಗೆಯಿಸುವ ಪ್ರಯತ್ನಗಳನ್ನೆಲ್ಲ ನಡೆಯಿಸಿದರು. ಯಾವುದೂ ನಡೆಯಲಿಲ್ಲ. ಎಲ್ಲರೂ ಗಟ್ಟಿಯಾಗಿ ಕುಳಿತರು. ಅಂತು ನಮ್ಮೂರ ವರನ್ನು ಕೇಳದೇ ನಾಮಿನೇಶನು ಹಾಕಿದ್ದಕ್ಕೆ ನಾಗಯ್ಯ ಸೆಟ್ಟರೂ, ಚನ್ನ ಮಯ್ಯರೂ, ಡಾಕ್ಟರರೂ ಕಿಡಿಕಿಡಿಯಾದರು. ಆ ಮೇಲೆ ಇವರ ನಾಮಿನೇಶನು ತಡವಾಗಿ ಬಂದಿತೆಂದು ಸುಳ್ಳು ಆರೋಪ!

ಡಾಕ್ಟರರು ಬಹಳ ನೊಂದು ನಾಗಯ್ಯ ಸೆಟ್ಟರಿಗೂ ಚನ್ನ ಮಯ್ಯರಿಗೂ ರಾಜಿ ಮಾಡಿಸಿ, ನಮ್ಮೂರಿನ ಕಡೆಯಿಂದ ನಾಗಯ್ಯ ಸೆಟ್ಟರನ್ನಾರಿಸಿದರೂ ಚಿಂತೆಯಿಲ್ಲ; ಮಯ್ಯರಾದರೂ ಚಿಂತೆಯಿಲ್ಲ—ಖಾಸಗಿಯಿಂದ ನಿಲ್ಲಬೇಕು

ಮುಡೂರ, ಮೂಸೆ ಜ್ಯಾರಿಗಳ ಹೆಸರು ಮುಂದಕ್ಕೆ ಬರಲಾರದು. ಆದರೆ ಊರಿನ ಹೊರಗಿನವರು ಎಂದೂ ನಮ್ಮೂರ ಪ್ರತಿನಿಧಿಗಳಾಗುವುದು ಬೇಡ —ಎಂದು ಸಾರತೊಡಗಿದರು. ಆದರೆ ಆ ಇಬ್ಬರಲ್ಲಿ ಯಾರಾಗಲಿ—ಎಂಬ ವಿಚಾರ ತೀರ್ಮಾನವಾಗುವುದೇ ತುಸು ಕಷ್ಟವಾಯಿತು.

ತಿರುಗೊಮ್ಮೆ ವೈಕುಂಠರಾಯರು ನಮ್ಮೂರಿಗೆ ಬಂದರು. "ಹೋಗಲಿ, ನೀವು ನೀವು ಜಗಳ ಮಾಡಬಾರದು. ನಿಮ್ಮದೇ ಊರಿನ ಗಂಗೊಳ್ಳಿ ರಾಮ ನಾಯ್ಕರನ್ನು ಆರಿಸುವ, ರಾಜಿಯಿಂದ" ಎಂಬುದಾಗಿ ಸೂಚಿಸಿದರು. ವೈಕುಂಠ ರಾಯರಿಗೆ, ಮರ್ಯಾದೆಯಿಂದ ತಮ್ಮ ಊರಿಗೆ ಮರಳಲು ಸಾಧ್ಯವಾಗಲಿಲ್ಲ. ಈ ಪ್ರಶ್ನೆಯ ತೀರ್ಮಾನವೂ ಆಗಲಿಲ್ಲ. ಅಂತು ನಮ್ಮವರು ತಣ್ಣಗೆ ಕುಳಿತು ಮುಂದಿನ ಹಾದಿ ಯೋಚಿಸಿದರು. ನಾಗಯ್ಯ ಸೆಟ್ಟರಿಂದ ಕಾಂಗ್ರೆಸು ಅಧ್ಯಕ್ಷ ತನಕ್ಕೆ ರಾಜಿ ಅರ್ಜಿಯೂ ಹೋಯಿತು.

ಮೇಲಿನ ಕಮಿಟಿಯವರು ಬಲರಾಮರಾಯರನ್ನು ಬೋರ್ಡಿನ ಸದಸ್ಯ ತ್ವಕ್ಕೆ ಸೂಚಿಸಿದರು. ಬಲರಾಮರಾಯರು ತಾನು ಯಾರೆಂಬುದನ್ನು ವಿವರ ವಾಗಿ ನಮ್ಮೂರವರಿಗೆ ತಿಳಿಯಪಡಿಸಿ, ಕರಪತ್ರ ಹಂಚಿ, ನಮ್ಮ ಜನರ ಬೆಂಬಲ ವನ್ನು ಕೇಳಿದರು.

ಮುಡೂರನ ಹೆಸರನ್ನು ಕೇಳಿದ ಕೊಯಿಲೋ ಪಾದ್ರಿಗಳು, ಮುಡೂರ ನಮ್ಮ ಗ್ರಾಮದಿಂದ ಬೋರ್ಡಿಗೆ ಹೋಗುವ ದುರ್ಗತಿ ಬಂದಿತೇನು, ಜುವಾಂ ಸೋಜರನ್ನು ನಾನು ನಿಲ್ಲಿಸುತ್ತೇನೆ– ಎಂದು ನೇರಾಗಿ ಸ್ವತಂತ್ರ ತೀರ್ಮಾನ ಮಾಡಿದರು.

ಹದಿನೈದು ದಿವಸಗಳಲ್ಲಿ, ಚುನಾವಣೆಗೆ ನಿಲ್ಲುವ ಸ್ಪರ್ಧಿಗಳ ಪಟ್ಟಿ ಹೊರಬಿದ್ದಿತು. ಕಾಂಗ್ರೇಸಿನ ಪರವಾಗಿ ಬಲರಾಮರಾಯರೇ ನಿಂತಿದ್ದರು. ಸ್ವತಂತ್ರವಾಗಿ ಜುವಾಂ ಸೋಜರು. ಬೇರೆ ಸ್ವತಂತ್ರ ಮುಂದಾಳುಗಳೆಂದರೆ, ನಾಗಯ್ಯ ಸೆಟ್ಟರು, ಚನ್ನಮಯ್ಯರು, ಚಿನ್ನಪ್ಪ ಸೇರೆಗಾರರು. ಹೀಗಿದ್ದ ಮೇಲೆ ಕೇಳಬೇಕೆ! ಅವರವರ ಪಂಗಡಗಳು ಚುರುಕಿನಿಂದ ಕೆಲಸ ತೊಡಗಿದುವು. ಸುಬ್ಬ ಪೂಜಾರಿ ಶೀನಪ್ಪ ಸೇರೆಗಾರರ ಏಜಂಟರಲ್ಲಿ ಒಬ್ಬ. ಊರ ಶ್ಯಾನುಭಾ ಗರು ಒಳಗಿಂದ ಜುವಾಂ ಸೋಜರಿಗೆ ನೆರವು. ನಾಗಯ್ಯ ಸೆಟ್ಟರಿಗೆ ಅವರ ಜನವಿದೆ. ಜನ್ನ ಪೈಗಳು ಏನು ಮಾಡುತ್ತಾರೆಂಬ ನಿರ್ಣಯವಾಗಿಲ್ಲ; ಆದರೆ ಸೀತೈತಾಳರು ನಾಗಯ್ಯನ ಬೆಂಬಲಕ್ಕಿದ್ದಾರೆ.

ಕೊನೆಯ ಗಳಿಗೆಯಲ್ಲಿ ರಾಮನಾಯ್ಕರು ಸಹ ಕಾಂಗ್ರೇಸನ್ನು ಬಿಟ್ಟು ಸ್ವತಂತ್ರರಾಗಿ ನಮ್ಮ ಊರಿನ ಪರವಾಗಿಯೇ ನಿಲ್ಲುವರೆಂಬುದೂ ಖಾತ್ರಿಯಾಯಿತು. ಅಕ್ಕಣಿ ಅವರ ಪರವಾಗಿ ಬಿರುಸಾಗಿ ಕ್ಯಾನವಾಸಿಂಗ್ ತೊಡಗಿದ್ದಾಳೆ. ನಾಯ್ಕರಿಗೆ ಓಟು ಕೊಡದೆ ಇದ್ದವರ ಮರ್ಯಾದೆ ಉಳಿಸುವಂತಿಲ್ಲ—ಎಂಬ ಗದರಿಕೆಯೂ ಇದೆ.

ತಾಯಿ ರಂಗಸ್ಥಳಕ್ಕೆ ಇಳಿದಳು-ಎಂದ ಮೇಲೆ ಪುಟ್ಟರಂಗಿ ಬಿಟ್ಟಾಳೇ? ಅವಳೂ ಯಾರ್ಯಾರನ್ನು ಕಾಣಲು ತೊಡಗಿದಳು. ಚನ್ನಮಯ್ಯರ ಟೀಪಾರ್ಟಿಗಳು ಬಹುವಾಗಿ ನಡೆಯ ತೊಡಗಿದುವು. ಬಚ್ಚ, ಸಂಕಪ್ಪ, ಅಣ್ಣು, ತಮ್ಮಿಷ್ಟ ಬಂದವರನ್ನು ಬೈಯುತ್ತಾ ಊರಲ್ಲಿ ತಿರುಗಾಡತೊಡಗಿದರು. ಇಲೆಕ್ಷನಿಗೆ ಇನ್ನೂ ಒಂದು ತಿಂಗಳಿದೆಯಾದರೂ, ರಾತ್ರಿ ನಿದ್ದೆ ಯಾರಿಗೂ ಇಲ್ಲ.

ಡಾಕ್ಟರರು ಬಹಳ ಚಿಂತೆಗೊಳಗಾದರು. 'ಅಯ್ಯೋ, ಗ್ರಾಮವೆಲ್ಲವೂ ಹೀಗಾದರೆ ಏನು ಗತಿ?' ಎಂದು ಕನಿಕರಪಟ್ಟರು. ಕೆರೆಕಟ್ಟೆ ನರಸಿಂಹಯ್ಯ ಅವರಲ್ಲಿ ಬಂದು —ಸೋಜರಿಗೆ ಮೆಂಬರಿಕೆಯಾದರೆ ಶಾಲೆ ಹೋಯಿತೆಂದು ಲೆಕ್ಕ—ಎಂದು ತನ್ನಿಂದಾದ ಮೆಹನತ್ತು ಮಾಡುತ್ತಿದ್ದ. ಹೇಗಾದರೂ, ಚನ್ನಮಯ್ಯರಿಗೂ ನಾಗಯ್ಯನಿಗೂ ರಾಜಿಯಾಗಿ ಶಾಲೆಉಳಿದರೆ ಸಾಕು-ಎಂಬುದು ಅವನ ಈಗಿನ ಮನಸ್ಸು. ಅವನ ತಮ್ಮ ಉಪಾಧ್ಯಾಯನಾಗಿರುವ ಊರಿನ ಶಾಲೆಯನ್ನು ಉಳಿಸುವವರಿಗೇನೆ ಅವನ ಓಟು.

ನಾಳಿನ ಇಲೆಕ್ಷನಿನ ಚದುರಂಗದ ಆಟ ಅದೃಷ್ಟಕ್ಕೆ ಮೀರಿದ್ದು. ಹೆಣ್ಣು, ಹಣ, ಸೇಡು, ದ್ವೇಷ, ಅಭಿಮಾನ, ದೇಶಭಕ್ತಿ—ಇವುಗಳ ವಿಚಿತ್ರ ಅವಿಲು. ಪಾಕ ಮುಗಿದ ಮೇಲೆ ಯಾವ ರುಚಿ ಈ ಅವಿಲಿಗೆ ಬರುತ್ತದೋ, ಆಗ ಉಣ್ಣುವವರ ಸ್ಥಿತಿ ಹೇಗಿರುತ್ತದೋ——ಎಂದು ನೋಡಿದರಾಯಿತು.



# ಶಬ್ದ ಕೋಶ

**ಅಗೇಡಿ**-ಬತ್ತದ ಸಸಿ ಬೆಳೆಯುವ ಗದ್ದೆ.
**ಅಟ್ರಾಕಣಿ**-ವ್ಯರ್ಥ ಜೀವಿ, ಕೆಲಸಕ್ಕೆ ಬಾರದ ಒಡವೆ.
**ಅದ್ಗಣಿ**-ಅಕ್ಕಸಾಲಿಯ ಅಡಿಗಲ್ಲು
**ಅಬಕಾರಿ**-Excise
**ಅಲಾಯದ**-ಬೇರೆಯೇ.
**ಆಚಾರಿ**-ಬಡಗಿ.
**ಆಸಾಟಿ**-ಅಷ್ಟೊಂದು.
**ಈಸಾರ್ಗಲು**-ಕಂದಾಯದ ಹಣ.
**ಉಡಾಪಿ**-ಉಡಾಳತನ.
**ಊಂಚು**-ಉತ್ತಮ.
**ಏಲಂ**-ಲಿಲಾವು, ಹರಾಜು.
**ಒತ್ತೆ**-ಒಂಟಿ.
**ಕಡಕಟ್ಟು**-ಸಾಲದ ವಹಿವಾಟು.
**ಕಡಿಗೆ**-ಗುಜ್ಜೆ, ಎಳತಾದ ಹಲಸಿನ ಕಾಯಿ.
**ಕಣಿಲೆ**-ಬಿದಿರಿನ ಮೊಳಕೆ.
**ಕಸರು**-ಸಗಟು ರುಚಿ, ಕಿಲುಬಿನ ರುಚಿ.
**ಕಳಸೆ**-೧೪ ಸೇರುಗಳ ಮಾನ.
**ಕಿಟ್ಟ**-ಕರ್ನ, ಮೃದಂಗಕ್ಕೆ ಸ್ವರ ಬರಲು ಲೇಪಿಸುವ ಕಿಟ್ಟ.
**ಕಾಯಿಸು**-ಖಾಯಿಸು, ಇಷ್ಟ.
**ಕಾಂಜರಗೋಟು**-ಮಾಪಿಳ್ಳೆ ಭಾಷೆಯಲ್ಲಿ 'ಕಾಸರಗೋಡು' ಎಂಬ ಊರು.
**ಕುಳ**-ಗಿರಾಕಿ.
**ಕುಳವಾರು**-ಗಿರಾಕಿ ಆಸಾಮಿ.
**ಕೋದಂಡ**-ಒಂದು ಶಿಕ್ಷೆ
**ಕೋಲುಹೊಟ್ಟೆ**-ನೀಳ ಹೊಟ್ಟೆ.
**ಗಡಂಗು**-ಪಡಕಾನೆ, ಸರೆಯಂಗಡಿ.
**ಗಂಜಿ**-ಅಂಬಲಿ, ಅಕ್ಕಿ ಅಂಬಲಿ.
**ಗಾಳಿಸೋಂಕು**-ಗಾಳಿಯಲ್ಲಿ ಸಂಚರಿಸುವ ದೆವ್ವ ಬಡಿಯುವುದು.
**ಗುಜ್ಜೆ**-ಎಳೆಯ ಹಲಸಿನ ಕಾಯಿ.
**ಗುಡಿಗಾರ**-ಬಣ್ಣಗಾರ, ಚಿತ್ರಕಾರ.
**ಗುತ್ತೆ**-ಕಂಟ್ರಾಕ್ಟು, ಗುತ್ತಿಗೆ.
**ಗೆಜ್ಜೆಕಟ್ಟು**- ವ್ಯವಸಾಯಿ ನರ್ತಕಿಯಾಗು, ವ್ಯವಸಾಯಿ ಸೂಳೆಯಾಗು.
**ಗೇಣಿ**-ಲಾವಣಿ.
**ಜಡಜಾಪತ್ತು**-ಜ್ವರ, ಸಂಕಟ.
**ಜೀಕು**- ಮೆಟ್ಟಿನ ತೊಗಲಿಂದ ಹೊರಡುವ ಸ್ವರ.
**ಜೀತು**-ಅತ್ಯುತ್ತಮ
**ಟಿಪಿನಿ**-ಉಪಹಾರ, Tiffin.
**ತರಾತುರಿ**-ಜರೂರಿ.
**ತಳ್ಳಿ ಅರ್ಜಿ**-ಬಿನಾಮಿ ಬರಹ.
**ತಳ್ಳಿಗೆ ಹೋಗು**-ಗೊಡವೆಗೆ ಹೋಗು.
**ತಾರೀಪು**-ಹಾಸ್ಯ.
**ತಾಳ್ಳ**-ಪಲ್ಯ.

**ತೊಡನೆ**-ತಡಮೆ, ತಡೆಬಾಗಿಲು.

**ದಾಳಿ ತೊವೆ**-ಬೇಳೆ ತೊವ್ವೆ (ಕೊಂಕಣಿ).

**ದಿಗಣಿಹಾಕು**-ಒಟ್ಟಾರೆ ಕುಣಿ.

**ನದರು**-ದೃಷ್ಟಿ, ಇಷ್ಟ.

**ನಸ್ರಾಣಿ**-ನಿವಾರಿಸಲು ಕಠಿಣನಾದ ಬಿಕ್ಷುಕ.

**ನಂಬ್ರ**-ದಾವೆ.

**ನೇವಳ**-ಉಡಿದಾರ.

**ನೊಗವೇರು**-ಉಳತೊಡಗು.

**ಪಕಾಸು**-ಮಾಡಿಗೆ ಹಾಕುವ ಒಂದು ಮರದ ತೋಳು.

**ಪಾಟಾಳಿ**-ಸ್ಥಾನಿಕ, ಒಂದು ಜನ ವರ್ಗ.

**ಪಾಣಿಪಂಚೆ**-ಜವುಳುಜವುಳಾದ ಅಗಲ ಕಡಿಮೆ ಪಂಚೆ.

**ಪಾತಾಳಗರುಡ**-ಎಂತಹ ಆಳಕ್ಕೆ ಬಿದ್ದುದನ್ನೂ ಎತ್ತಬಲ್ಲ ಸಾಧನ.

**ಪಿಟಿಲುಬಾರಿಸು**-ಬಹುಹೊತ್ತು ಹೇಳಿದ್ದನ್ನೇ ಹೇಳು.

**ಪೈಂಟು**-ವಿಷಯ.

**ಪ್ರಸ್ತ**-ಫಲಶೋಭನ.

**ಪ್ರಾಕು**-ಹಿಂದಿನ ಕಾಲ.

**ಫೇರಿಬಿಡು**-ಓಟಕೀಳು.

**ಬಾಲಗಿಸು**-ಹುರಿದುಂಬಿಸು.

**ಬೋಗಣಿ**-ಒಂದು ಪಾತ್ರೆ

**ಭಾರದಕೆ**-ವತನ, ಹಿರಿಮೆ

**ಮಡಲು**-ತೆಂಗಿನಸೋಗೆಯ ಚಾಪೆ

**ಮರಸಣಿಗೆ**-ಒಂದು ವಿಧದ ಗಡ್ಡೆ

**ಮಾರಾಮಾರಿ**-ಜಗಳ, ಹೊಡೆತ, ಬಡಿತ

**ಮಾರಿಪತ್ತು**-ಕಡೆ, ತಾಬೆ;

**ಮಾರಿಬಲೆ**-ಹೆಬ್ಬಲೆ

**ಮಿಣಿ**-ದಪ್ಪನಾದ ಹಗ್ಗ

**ಮುಖಾಬಿಲೆ**-ಮುಖದೆದುರು ಬೀಳುವುದು.

**ಮುದ್ದೈ**-ಆರೋಪ ತಂದವ

**ಮುದ್ದೈಯಾಲೆ**-ಆರೋಪಿತ

**ಮೂಕಿ**-ಗಾಡಿಯಲ್ಲಿ ಅದನ್ನು ಹೊಡೆವವನು ಕುಳಿತು ಕೊಳ್ಳುವ ಜಾಗ

**ಮೂಲತೀರ್ಪು**-ಮೊದಲ ತೀರ್ಮಾನ

**ಮೂರ್ತೆ**-ಸೇಂದಿ ಇಳಿಸುವಿಕೆ

**ಮೇನಿಯು**-ಗಾಣಿಗ

**ಮೋಪು**-ನಾಟ

**ರಾಮಾರೂಢಿಯಾಗಿ**-ಬಹಿರಂಗವಾಗಿ

**ರೈಸು**-ರಂಜಿಸು, ಶೋಭಿಸು

**ಲಗಾಡಿ**-ಲಿಗಾಡಿ, ಹಾಳು, ನಾಶ

**ವಹಿವಾಟು**-ವ್ಯವಹಾರ, ಲೆಕ್ಕಾಚಾರ

**ಸಾಗುವಳಿ**-ಬೇಸಾಯ

**ಸೈಗುಡು**-ಒಪ್ಪು, ಹೂಂ ಎನ್ನು

**ಸೋಟೆ**-ಬಡಿಗೆ

**ಹಡೆಮೈಲಿಗೆ**-ಕೆಟ್ಟ ಮೈಲಿಗೆ

**ಹನೆಹೆಡೆ**-ತಾಳೆಮರದ ಸೋಗೆ.
**ಹಪ್ಪುಕಳ**-ಹದ್ದು.
**ಹರಹರ**-ಅಷ್ಟಕಷ್ಟ; ಅಲ್ಲಿಂದಲ್ಲಿಗೆ.
**ಹಂದಿಮೀನು**-ಒಂದು ಜಾತಿಯ ಭಾರಿ ಮೀನು.
**ಹೈಲು**-ಐಲು, ನಗೆಗೇಡು.

